ತಂತಿ: ''ಸ್ಮಾರ್ಕ್''

ಸ್ಥಾಪನೆ: 1972
ದೂರವಾಣಿ: 577369

# ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ, ಬೆಂಗಳೂರು

**ಮಂಡಳಿಯ ಉದ್ದೇಶಗಳು:-**

1) ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿ ಪ್ರಾಂಗಣಗಳ ಅಭಿವೃದ್ಧಿ ಹಾಗೂ ಭೂಸ್ವಾಧೀನಕ್ಕಾಗಿ ಸಾಲ ಬಿಡುಗಡೆ ಮಾಡಿಸುವುದು.
2) ಮಾರುಕಟ್ಟೆ ಸಮಿತಿಗಳಿಗೆ ತೂಕದ ಯಂತ್ರಗಳ ಖರೀದಿಗಾಗಿ ಹಾಗೂ ಸಾರಿಗೆ ವಾಹನ ಖರೀದಿಗಾಗಿ ಅನುದಾನ ನೀಡುವುದು.
3) ಮಾರುಕಟ್ಟೆ ಸಮಿತಿಗಳಲ್ಲಿ ವೈಜ್ಞಾನಿಕ ರೀತಿಯ ದಾಸ್ತಾನು ಮಳಿಗೆಗಳ ನಿರ್ಮಾಣಕ್ಕಾಗಿ ಅನುದಾನ ನೀಡುವುದು.
4) ನಿಯಂತ್ರಿತ ಮಾರುಕಟ್ಟೆಗಳ ಕಾರ್ಯಾನುಷ್ಠಾನ ಅವುಗಳ ಪ್ರಗತಿ ಹಾಗೂ ಕೃಷಿ ಮಾರಾಟದ ವಿಷಯದ ಬಗ್ಗೆ ಗ್ರಾಮೀಣ ಪ್ರದೇಶದಲ್ಲಿ ನೆರವಾಗಲು ಪ್ರಚಾರ ಮತ್ತು ಪ್ರಸಾರ ಕೈಗೊಳ್ಳುವುದು.
5) ಕೃಷಿ ಮಾರಾಟದ ಸಾಹಿತ್ಯಗಳ ಪರಿಚಯ ಮಾಡಿಕೊಳ್ಳಲು ಕನ್ನಡದಲ್ಲಿ ಒಂದು ಮಾಸಿಕವನ್ನು ಪ್ರಕಟಿಸುವುದು.
6) ಕೃಷಿ ಮಾರಾಟಕ್ಕೆ ಅದರಲ್ಲೂ ವಿಶೇಷವಾಗಿ ನಿಯಂತ್ರಿತ ಮಾರುಕಟ್ಟೆಗಳ ಕಾರ್ಯಾಚರಣೆಯ ಹಾಗೂ ಅಭಿವೃದ್ಧಿಗೆ ಸಂಬಂಧಿಸಿದಂತೆ ಸಂಶೋಧನೆ ನಡೆಸಿ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳುವುದು.
7) ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ ಮತ್ತು ನೌಕರರಿಗೆ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಗಳ ಸದಸ್ಯರಿಗೆ, ರೈತರಿಗೆ ಹಾಗೂ ಮಂಡಲ ಪಂಚಾಯತ್ ಸದಸ್ಯರಿಗೆ ಹಾಗೂ ಇತರೆ ಸಂಬಂಧಿಸಿದವರಿಗೆ ಕೃಷಿ ಉತ್ಪನ್ನ ಮಾರಾಟ ಮತ್ತಿತರ ಅನುಷಂಗಿಕ ವಿಷಯಗಳನ್ನೊಳಗೊಂಡಂತೆ ತರಬೇತಿ ಜರುಗಿಸುವುದು.

**ರೈತರಿಗೆ ಸಲಹೆ:**

1) ವ್ಯವಸಾಯೋತ್ಪನ್ನಗಳನ್ನು ನಿಯಂತ್ರಿತ ಮುಖ್ಯ ಅಥವಾ ಉಪ ಮಾರುಕಟ್ಟೆ ಪ್ರಾಂಗಣಗಳಲ್ಲಿಯೇ ಮಾರಾಟ ಮಾಡುವುದು ಕಾನೂನು ಪ್ರಕಾರ ಕಡ್ಡಾಯವಾಗಿದೆ. ಕೃಷಿ ಉತ್ಪನ್ನ ಮಾರಾಟ ಮಾಡುವಾಗ ಕಮಿಷನ್ (ದಲಾಲಿ) ಕೊಡಬಾರದು. ಸರಕು ಮಾರಾಟ ಮಾಡುವಾಗ ಸರಿಯಾದ ತೂಕಕ್ಕೆ ಆಗ್ರಹಪಡಿಸಬೇಕು.
2) ಸ್ವಚ್ಛವಾದ ಮತ್ತು ಪರಿಪಕ್ವವಾದ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುವುದರಿಂದ ಸ್ಪರ್ಧಾತ್ಮಕ ಬೆಲೆ ಪಡೆಯಲು ನೆರವಾಗುವುದು. ಬಿಳಿ ಚೀಟಿಯ ವ್ಯವಹಾರವನ್ನು ತಪ್ಪದೆ ಸಂಬಂಧಿಸಿದ ಮಾರುಕಟ್ಟೆಗಳ ಗಮನಕ್ಕೆ ತಂದು ಪರಿಹಾರ ಪಡೆದುಕೊಳ್ಳಿ.
3) ಕೃಷಿ ಉತ್ಪನ್ನದ ಮಾರಾಟದಲ್ಲಿ ಉದ್ಭವಿಸುವ ಎಲ್ಲಾ ರೀತಿಯ ತೊಂದರೆ ಮತ್ತು ತಂಟೆ ತಕರಾರುಗಳಿಗೆ ಸಮೀಪದ ಮಾರುಕಟ್ಟೆ ಸಮಿತಿ ಅಥವಾ ಸಂಬಂಧಿಸಿದ ಅಧಿಕಾರಿಗಳನ್ನು ಸಂಪರ್ಕಿಸಿರಿ.

**ಬಿ. ಈಶ್ವರಪ್ಪ, ಐ.ಎ.ಎಸ್.**
ಕಾರ್ಯದರ್ಶಿ

**ಕೆ.ವಿ. ನಾಗೇಶ್**
ಆಡಳಿತಾಧಿಕಾರಿ

# ಕ್ರಿಯಾಚೇತನ

(ಡಾ॥ ಎಂ. ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭದ ಸವಿ ನೆನಪಿನ ಸಂಚಿಕೆ)




ಸಂಪಾದಕ :

**ಡಾ॥ ಸಿ. ಯು. ಮಂಜುನಾಥ್**

3-8-1991

**ಡಾ॥ ಎಂ. ಚಿದಾನಂದಮೂರ್ತಿ ಅಭಿನಂದನ ಸಮಿತಿ**

ವಿಜಯನಗರ ಎರಡನೆಯ ಹಂತ, ಬೆಂಗಳೂರು-೫೬೦ ೦೪೦

KRIYACHETANA – A Felicitation volume brought out to commemorate the function on 3-8-1991

Written by : Various Authors

Edited by : Dr. C. U. Manjunath

Published by : Dr. M. Chidanandamurthy Abhinandana Samiti
Bangalore

Cover Page Artist : C. Chandrasekara



Printed by :
NETHRA PRINTERS
6th Main, Chamarajpet
Bangalore-560 019

# ಡಾ. ಎಂ. ಚಿದಾನಂದಮೂರ್ತಿ ಅಭಿನಂದನ ಸಮಿತಿ

ಜಗದ್ಗುರು ಶ್ರೀ ಸಂಗನ ಬಸವ ಸ್ವಾಮಿಗಳು
ಗೌರವಾಧ್ಯಕ್ಷರು

ಡಾ॥ ಸಾ. ಶಿ. ಮರುಳಯ್ಯ
ಕಾರ್ಯಾಧ್ಯಕ್ಷರು

ಜಿ. ನಾರಾಯಣ
ಸ್ವಾಗತಾಧ್ಯಕ್ಷರು

ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ
ಅಧ್ಯಕ್ಷರು, ಸಲಹಾ ಸಮಿತಿ

ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯ
ಅಧ್ಯಕ್ಷರು, ಹಣಕಾಸು ಸಮಿತಿ

ಬಿ. ಆರ್. ವಿ. ಗೌಡ
ಅಧ್ಯಕ್ಷರು, ಜಾಹಿರಾತು ಸಮಿತಿ

ಅಶೋಕ್
ಪ್ರೊ॥ ತಿ. ಶ್ರೀ. ನಾಗಭೂಷಣ
ಡಾ॥ ಪಿ. ವಿ. ನಾರಾಯಣ
ಡಾ॥ ಎಚ್. ಎಂ. ಮರುಳಸಿದ್ಧಯ್ಯ
ಬಿ. ಎಸ್. ಶಿವಶಂಕರ್
ಉಪಾಧ್ಯಕ್ಷರುಗಳು

ಡಾ॥ ಎಚ್. ಎಸ್. ಗೋಪಾಲರಾವ್
ರಾ. ನಂ. ಚಂದ್ರಶೇಖರ
ಎಚ್. ಜಯಮ್ಮ ಕರಿಯಣ್ಣ
ಕೆ. ವಿ. ನಾಗರಾಜಮೂರ್ತಿ
ಸಿದ್ಧಯ್ಯ
ಕಾರ್ಯದರ್ಶಿಗಳು

ನಂ. ನಂಜಪ್ಪ
ಖಜಾಂಚಿ

ಲಕ್ಷ್ಮಣ ತೆಲಗಾವಿ
ಸಂಪಾದಕರು 'ಸಂಶೋಧನ'

ಡಾ॥ ಸಿ. ಯು. ಮಂಜುನಾಥ್
ಸಂಪಾದಕರು 'ಕ್ರಿಯಾಚೇತನ'

ಪ್ರೇಮಾಭಟ್
ಅಧ್ಯಕ್ಷರು, ಮಹಿಳಾ ಸಮಿತಿ

ಧರ್ಮದಾಸ ಬಾರ್ಕಿ
ಅಧ್ಯಕ್ಷರು, ಪುಸ್ತಕ ಪ್ರದರ್ಶನ ಸಮಿತಿ

ಡಾ॥ ಎಸ್. ವಿದ್ಯಾಶಂಕರ
ಅಧ್ಯಕ್ಷರು, ಪ್ರಚಾರ ಸಮಿತಿ

ಅಮೃತ ನಾರಾಯಣ
ಇಂದಿರಾ ಹೆಗ್ಗಡೆ
ಬಾ. ಹ. ಉಪೇಂದ್ರ
ನಾ. ಗೀತಾಚಾರ್ಯ
ಸಿ. ಚಂದ್ರಶೇಖರ
ಬೆ. ರಾ. ನಾಗರಾಜ್
ಜಿ. ಸಿ. ನಾರಾಯಣ
ಜೆ. ಆರ್. ಪರೇರಾ
ರಾ. ಪ್ರಭುಶಂಕರ
ಎಚ್. ಎನ್. ರಮೇಶಬಾಬು
ರಾಧಾಕೃಷ್ಣ
ಕೆ. ರಾಮಚಂದ್ರ
ಎಸ್. ಶಿವಲಿಂಗಯ್ಯ
ಜಿ. ವಿ. ಶಿವಸ್ವಾಮಿ
ಡಾ॥ ಆರ್. ಶೇಷಶಾಸ್ತ್ರಿ
ಎಚ್. ಸಿ. ಸೋಮಶೇಖರ
ಹೊಸೂರು ನಾಗರಾಜ್
ಸದಸ್ಯರುಗಳು

## ಡಾ. ಎಂ. ಚಿದಾನಂದಮೂರ್ತಿ ಅಭಿನಂದನ ಸಮಾರಂಭದ ಸ್ವಾಗತ ಸಮಿತಿ

1. ಜಗದ್ಗುರು ಮಲ್ಲಿಕಾರ್ಜುನ ಮುರುಗರಾಜೇಂದ್ರ ಮಹಾಸ್ವಾಮಿಗಳು, ಚಿತ್ರದುರ್ಗ
2. ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳ ಪೀಠ, ಮೈಸೂರು
3. ಶ್ರೀ ಶಿವಕುಮಾರ ಸ್ವಾಮಿಗಳು ಸಿದ್ಧಗಂಗಾ ಮಠ, ತುಮಕೂರು
4. ಷ. ಬ್ರ. ಶ್ರೀ ರೇಣುಕಾಚಾರ್ಯ ಶಿವಾಚಾರ್ಯ ಮಹಾಸ್ವಾಮಿಗಳು, ತಾವರೆಕೆರೆ
5. ಷ. ಬ್ರ ಶ್ರೀ ಗುರುಮೂರ್ತಿ ಶಿವಾಚಾರ್ಯ ಹಾಲುಸ್ವಾಮಿ ಮಠ
6. ಡಾ. ಶ್ರೀ ಜಚನಿ, ಬೆಂಗಳೂರು
7. ಪೂಜ್ಯ ಶ್ರೀ ವೀರೇಂದ್ರ ಹೆಗ್ಗಡೆ, ಧರ್ಮಸ್ಥಳ
8. ಎಂ. ವೀರಭದ್ರಪ್ಪ, ಶಾಸಕರು, ದಾವಣಗೆರೆ
9. ಕೆ. ಶಿವರಾಮು ಐ.ಎ.ಎಸ್, ಬೆಂಗಳೂರು
10. ಡಾ. ಸದ್ಯೋಜಾತ ಸ್ವಾಮಿಗಳು, ದಾವಣಗೆರೆ
11. ಡಾ. ಎಂ. ಎಂ. ಕಲಬುರ್ಗಿ, ಧಾರವಾಡ
12. ಡಾ. ಸಂಗಮೇಶ್ವರ ಸೌದತ್ತಿಮಠ, ಗುಲ್ಬರ್ಗ
13. ಡಾ. ಬಸವರಾಜ ಸಬರದ, ಗುಲ್ಬರ್ಗ
14. ಡಾ. ವಸಂತ ಕುಷ್ಟಗಿ, ಗುಲ್ಬರ್ಗ
15. ಡಾ. ಬಿ. ಆರ್. ಹಿರೇಮಠ, ಧಾರವಾಡ
16. ಡಾ. ಕೆ. ಆರ್. ವೆಂಕಟರೆಡ್ಡಿ, ದೊಡ್ಡಬಳ್ಳಾಪುರ
17. ಗೊ. ರು. ಚನ್ನಬಸಪ್ಪ, ಬೆಂಗಳೂರು
18. ಕೆ. ಬಿ. ಷಣ್ಮುಖಪ್ಪ, ಬೆಂಗಳೂರು
19. ಬಿ. ವಿ. ಪುಟ್ಟೇಗೌಡ, ಮಾಜಿ ಮೇಯರ್ ಬೆಂಗಳೂರು
20. ಬಿ. ಎಸ್. ಪರಮಶಿವಯ್ಯ, ಬೆಂಗಳೂರು
21. ಎಸ್. ಜಿ. ಶಿವಶಂಕರಯ್ಯ, ಭದ್ರಾವತಿ
22. ಶಿವಾನಂದಮೂರ್ತಿ, ಬೆಂಗಳೂರು
23. ಗಿರಿಜಾಶಂಕರ್, ಚಿಕ್ಕಮಗಳೂರು
24. ಎನ್. ಎಸ್. ಬಸವರಾಜಯ್ಯ, ಚಿಕ್ಕಮಗಳೂರು
25. ಮಾಳಿಗೆ ಷಡಕ್ಷರಯ್ಯ, ಬೀರೂರು
26. ಕೆ. ವಾಸುದೇವಾಚಾರ್, ಶಿವಮೊಗ್ಗ
27. ವೇಣುಗೋಪಾಲ್, ಹೊಸಕೋಟೆ
28. ಷಣ್ಮುಖಯ್ಯ ಅಕ್ಕೂರು ಮಠ
29. ಸಿ. ಸೋಮಶೇಖರ ಕೆಎಎಸ್, ಬೆಂಗಳೂರು
30. ಆಲ್ಲ ಚಿರಂಜೀವಿ, ಬೆಂಗಳೂರು
31. ಟಿ. ರಾಮಯ್ಯ, ಬೆಂಗಳೂರು
32. ಎಸ್. ವಿ. ಶ್ರೀನಿವಾಸರಾವ್, ಬೆಂಗಳೂರು
33. ಎಲ್ಲೇಗೌಡ ಬೆಸಗರಹಳ್ಳಿ, ಕನಕಪುರ
34. ಕವಿತಾಕೃಷ್ಣ, ತುಮಕೂರು
35. ಬಿ. ಪಿ. ವೀರೇಂದ್ರಕುಮಾರ್, ಚಿತ್ರದುರ್ಗ
36. ಬಳ್ಳೇಕೆರೆ ಹನುಮಂತಪ್ಪ, ಶಿವಮೊಗ್ಗ
37. ಎನ್. ಗಿರಿಗೌಡ, ಮೈಸೂರು
38. ಎನ್. ಎಚ್. ರಾಜು, ಮಂಡ್ಯ
39. ಡಿ. ಜೆ. ಪದ್ಮನಾಭ, ಕೊಡಗು
40. ಪಿ. ರೇವಮ್ಮ, ಬೆಂಗಳೂರು
41. ಟಿ. ಕೆಂಪಹನುಮಯ್ಯ, ಕುಂದಾಪುರ
42. ಮಾ. ಹನುಮಂತೇಗೌಡ, ಹಾಸನ
43. ಕೋದಂಡರಾಮಶೆಟ್ಟಿ, ಚಿಕ್ಕಮಗಳೂರು
44. ಎಸ್. ಎಂ. ಹರದಗಟ್ಟಿ, ಬೆಳಗಾವಿ
45. ಟಿ. ಕೆ. ಮಹಮೂದ್, ಸಿದ್ದಾಪುರ
46. ಶಿವಾನಂದ ಗಾಳಿ, ಧಾರವಾಡ
47. ಬಿ. ಮಲ್ಲಿಕಾರ್ಜುನಯ್ಯ, ಬೆಂಗಳೂರು
48. ಬಿ. ಮಹಾದೇವಪ್ಪ, ಗುಲ್ಬರ್ಗಾ
49. ಪಂಚಾಕ್ಷರಿ ಪುಣ್ಯಶೆಟ್ಟಿ, ಬೀದರ್
50. ಆರ್. ಆಂಜನೇಯಲು, ರಾಯಚೂರು

51. ಶ್ರೀ ಗುರುಮೂರ್ತಿ ಪೆಂಡಕೂರ್, ಬಳ್ಳಾರಿ ಜಿಲ್ಲೆ
52. ಶ್ರೀ ಎ. ಬಿ. ಬಸವರಾಜು, ಕೋಲಾರ ಜಿಲ್ಲೆ
53. ಶ್ರೀಮತಿ ನಿರೂಪಮಾ, ಬೆಂಗಳೂರು
54. ಶ್ರೀಮತಿ ಬಿ. ಟಿ. ಲಲಿತಾನಾಯಕ್, ಬೆಂಗಳೂರು
55. ಡಾ. ವಿಲಿಯಂ ಮಾಡ್ತಾ, ಧಾರವಾಡ
56. ಪ್ರೊ. ಹೆಚ್. ಜೆ. ಲಕ್ಕಪ್ಪಗೌಡ, ಶಿವಮೊಗ್ಗ ಜಿಲ್ಲೆ
57. ಶ್ರೀ ಹೆಚ್. ಬಿ. ಜ್ವಾಲನಯ್ಯ, ಹಾಸನ
58. ಶ್ರೀ ಜಿ. ಕೃಷ್ಣರಾವ್, ಹೈದರಾಬಾದ್
59. ಬೆ. ರಾ. ನಾಗರಾಜ್, ಬೆಂಗಳೂರು
60. ಡಾ. ಕೆ. ಅನಂತರಾಮು, ಮೈಸೂರು
61. ಡಾ. ಅಶೋಕ ಪೈ
62. ನಿ. ಪ್ರ. ಸ್ವ. ಶಾಂತವೀರ ಮಹಾಸ್ವಾಮಿಗಳು ಅರಸಿಕೆರೆ
63. ಶ್ರೀ ಶ್ರೀ ಶ್ರೀ ಇಳಕಲ್ಲ ಮಹಂತೇಶ ಶಿವಯೋಗಿಗಳು ಇಳಕಲ್ಲ.
64. ಟಿ. ವೀರಭದ್ರಯ್ಯ, ತುಮಕೂರು
65. ಕೆ. ಎಚ್. ಪರಮಶಿವಯ್ಯ, ತುಮಕೂರು
66. ಡಿ. ಚಂದ್ರಪ್ಪ, ತುಮಕೂರು
67. ಎಚ್. ಬಿ. ಮಹದೇವಪ್ಪ, ತುಮಕೂರು
68. ಗೋ. ಶ್ರೀನಿವಾಸ, ಬೆಂಗಳೂರು
69. ಶ್ರೀಮತಿ ಬಾ. ಹ. ರಮಾಕುಮಾರಿ, ತುಮಕೂರು
70. ಗೋಪಿನಾಥ್, ಬೆಂಗಳೂರು
71. ಪ್ರೊ. ಎಂ. ವಿ. ಸತ್ಯನಾರಾಯಣ, ಬೆಂಗಳೂರು
72. ಎಂ. ನಾಗರಾಜಯ್ಯ, ಬೆಂಗಳೂರು
73. ಪಿ. ಎಂ. ಸತ್ಯನಾರಾಯಣ, ಬೆಂಗಳೂರು
74. ಭದ್ರಯ್ಯ, ಬೆಂಗಳೂರು
75. ಎಂ. ಕೃಷ್ಣಪ್ಪ, ಬೆಂಗಳೂರು
77. ಕಾರ್ಯದರ್ಶಿ, ಕೇಂಬ್ರಿಡ್ಜ ಎಜುಕೇಶನ್ ಟ್ರಸ್ಟ್, ಬೆಂಗಳೂರು
78. ಪ್ಲಾರೆನ್ಸ್ ಹೈಸ್ಕೂಲ್, ಬೆಂಗಳೂರು
79. ಎಸ್. ನಂಜುಂಡಯ್ಯ, ಬೆಂಗಳೂರು
80. ಪಿ. ಪುಟ್ಟಪ್ಪ, ಬೆಂಗಳೂರು
81. ಶಿ. ಸಿದ್ಧಲಿಂಗಯ್ಯ
82. ಜಿ. ಎಸ್. ಬಸವಯ್ಯ
83. ಜಿ. ಎಸ್. ಶಾಂತಬಸವಯ್ಯ, ಬೆಂಗಳೂರು
84. ವಿದುಷಿ ಬಿ. ಎಸ್. ಚಂದ್ರಕಲಾ, ಬೆಂಗಳೂರು
85. ಸಿ. ಎಚ್. ಹನುಮಂತರಾಯ, ಬೆಂಗಳೂರು
86. ಎಂ. ಶಂಕರಯ್ಯ, ಬೆಂಗಳೂರು
87. ಅನಂತಪ್ರಕಾಶ್, ಶಕ್ತಿನಗರ
88. ಶ್ರೀನಿವಾಸ್, ಶಕ್ತಿನಗರ
89. ಎಚ್. ಎಸ್. ಹಿರಿಯಣ್ಣಯ್ಯ, ಶಕ್ತಿನಗರ
90. ಟಿ. ಚಂದ್ರಣ್ಣ
91. ಬಸವಲಿಂಗಪ್ಪ
92. ನಾಗರಾಜ್
93. ಜಯರಾಂ
94. ಚಂದ್ರಪ್ಪ
95. ಕೆ. ಗುಂಡಾಜೋಯಿಸರು, ಕೆಳದಿ
96. ವೈ. ಸಿ. ಬಸಪ್ಪ, ಬೆಂಗಳೂರು
97. ಶ್ರೀಮತಿ ಬಿ. ಮಂಗಳಗೌರಮ್ಮ, ಬೆಂಗಳೂರು
98. ಶಂಕರ ಪಟೇಲ್, ಬೆಂಗಳೂರು
99. ಸರ್ವಮಂಗಳಾ ಶಂಕರ್, ಬೆಂಗಳೂರು
100. ಉಮಾದೇವಿ ಉಮಾಶಂಕರ್, ಬೆಂಗಳೂರು
101. ಡಾ. ಎಸ್. ಕೊಟ್ಟೂರು, ತುಮಕೂರು
102. ಕೆ. ಪಿ. ಮನೋಹರಯ್ಯ, ಚಿತ್ರದುರ್ಗ
103. ಬಿ. ಆರ್. ಶಿವಣ್ಣ, ಬೆಂಗಳೂರು
104. ರಾಜೀವಲೋಚನಂ, ಬೆಂಗಳೂರು
105. ಬಿ. ಆರ್. ಶಿವಕುಮಾರ್, ಬೆಂಗಳೂರು

## ಡಾ॥ ಎಂ. ಚಿದಾನಂದಮೂರ್ತಿ ಅಭಿನಂದನ ಸಮಾರಂಭ

ಅಧ್ಯಕ್ಷತೆ :

**ಶ್ರೀ ಶ್ರೀ ಶ್ರೀ ಡಾ॥ ಶಿವಕುಮಾರ ಸ್ವಾಮೀಜಿ**

(ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು)

ಗೌರವ ಸಂಪುಟ 'ಸಂಶೋಧನ'ದ ಬಿಡುಗಡೆ :

**ಡಾ॥ ಪಿ. ಎಸ್. ರಾಮಾನುಜಂ**

(ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರು)

ಸುಸ್ಮೃತಿ ಸಂಚಿಕೆ 'ಕ್ರಿಯಾಚೇತನ'ದ ಬಿಡುಗಡೆ :

**ಶ್ರೀ ಕೆ. ಶಿವರಾಮು**

(ಬೆಂಗಳೂರು ಮಹಾನಗರ ಪಾಲಿಕೆಯ ಉಪಆಯುಕ್ತರು)

ಅಭಿನಂದನ ಭಾಷಣ :

**ಪ್ರೊ॥ ಎ. ಎನ್. ಮೂರ್ತಿರಾವ್**

**ಡಾ॥ ಎಂ. ಎಂ. ಕಲಬುರ್ಗಿ**

ದಿನಾಂಕ : 3-8-1991 ಶನಿವಾರ

ಸ್ಥಳ : ರವೀಂದ್ರ ಕಲಾಕ್ಷೇತ್ರ, ಬೆಂಗಳೂರು

ಸಮಯ : ಸಂಜೆ 6-00 ಗಂಟೆಗೆ

**ಅಧ್ಯಕ್ಷರು ಮತ್ತು ಸದಸ್ಯರು**

ಡಾ॥ ಎಂ. ಚಿದಾನಂದಮೂರ್ತಿ ಅಭಿನಂದನ ಸಮಿತಿ

## ಸಂಚಾಲಕರ ನುಡಿ

ಸುಮಾರು ಮೂರು ವರ್ಷಗಳ ಹಿಂದೆ ಸಾಹಿತ್ಯ ಪರಿಷತ್ತಿನಲ್ಲಿ ದಿ. ಅಣ್ಣಿಗೇರಿ ಯವರ ವಿಚಾರದಲ್ಲಿ ನಡೆದ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಬಂದಿದ್ದ ಡಾ. ಶೇಷ ಶಾಸ್ತ್ರಿಯವರು ಭೇಟಿಯಾಗಿ ತಮ್ಮ ಗುರುಗಳಾದ ಡಾ. ಎಂ. ಚಿದಾನಂದಮೂರ್ತಿ ಯವರಿಗೆ ಒಂದು ಅಭಿನಂದನ ಗ್ರಂಥವನ್ನು ಅರ್ಪಣೆ ಮಾಡುವ ಯೋಜನೆಯನ್ನು ಸೂಚಿಸಿದರು. ಬೆಂಗಳೂರಿನಲ್ಲಿ ಹಲವು ಮಿತ್ರರು 'ಮೇಷ್ಟ್ರಿಗೆ' ಸನ್ಮಾನ ಮಾಡಬೇಕೆಂಬ ಯೋಚನೆಯಲ್ಲಿದ್ದೆವು. ಎಸ್. ಶಿವಲಿಂಗಯ್ಯ ಕಂಡಾಗಲೆಲ್ಲ ಈ ವಿಷಯ ಹೇಳುತ್ತಲೇ ಇದ್ದರು. ಒಂದೆರಡು ದಿನಗಳಲ್ಲಿ ಡಾ. ಸಿ. ಯು. ಮಂಜುನಾಥ್, ಶೇಷಶಾಸ್ತ್ರಿ, ಎಸ್. ಶಿವಲಿಂಗಯ್ಯ ಪರಿಷತ್ತಿನ ಮೆಟ್ಟಿಲು ಮೇಲೆ ಸಭೆ ಸೇರಿದ್ದೆವು. ದೇವರ ಕೊಂಡಾ ರೆಡ್ಡಿ, ಕೆ. ಆರ್. ಗಣೇಶ್ ಮತ್ತು ಕೆಲವು ಗೆಳೆಯರು (ಅವರ ಹೆಸರು ನೆನಪಿಲ್ಲ) ಬಂದು ನಮ್ಮೊಡನೆ ಸೇರಿದರು. ಸನ್ಮಾನ ಸಮಾರಂಭ ನಡೆಸಬೇಕೆಂಬ ತೀರ್ಮಾನಕ್ಕೆ ಬಂದೆವು.

1989ರ ಜನವರಿಯಲ್ಲಿ ಒಂದು ವಿಸ್ತೃತ ಸಭೆ ಕರೆದೆವು ಸುಮಾರು 30 ಜನ ಸೇರಿದ್ದರು. ಆ ಸಭೆಯಲ್ಲಿ ಡಾ. ಎಂ. ಚಿದಾನಂದಮೂರ್ತಿಯವರಿಗೆ 10-5-1989 ರಂದು 58ನೆಯ ವರ್ಷದ ಹುಟ್ಟುಹಬ್ಬ. ಅಂದು ಅವರ ಕೆಲವು ಕಾರ್ಯಕ್ಷೇತ್ರಗಳನ್ನು ಗುರುತಿಸಿ ಒಂದು ದಿನದ ವಿಚಾರ ಸಂಕಿರಣ ನಡೆಸಿ, 60 ವರ್ಷ ತುಂಬುವ 10-5-91ರಂದು ಅರ್ಥಪೂರ್ಣ ರೀತಿಯಲ್ಲಿ ಅಭಿನಂದನ ಸಮಾರಂಭವನ್ನು ಮಾಡಬೇಕೆಂದು ತೀರ್ಮಾನವಾಗಿ ವಿಚಾರ ಸಂಕಿರಣವನ್ನು 'ಸಾಹಿತ್ಯ ಸಂಗಮದ' ಆಶ್ರಯದಲ್ಲಿ ನಡೆಸಲು ನಿರ್ಧರಿಸಲಾಯಿತು. ಇಂತಹ ಕಾರ್ಯಕ್ರಮಕ್ಕೆ ಒಬ್ಬ ಸಮರ್ಥ ಅಧ್ಯಕ್ಷರ ಅವಶ್ಯಕತೆ ಅರಿತಿದ್ದ ನಾವು ದಿ. ಎಂ. ವಿ. ಸೀತಾರಾಮಯ್ಯನವರನ್ನು ಸಂಪರ್ಕಿಸಿದೆವು. ಅವರು ಸಂತೋಷದಿಂದ ಒಪ್ಪಿ ಅಭಿನಂದನ ಸಮಿತಿಯ ಯೋಜನೆಗೆ ಒಂದು ಖಚಿತ ಸ್ವರೂಪ ನೀಡಿದರು. ಅವರ ನಿಧನದನಂತರ ಅಧ್ಯಕ್ಷರಾದ ಡಾ. ಸಾ. ಶಿ. ಮರುಳಯ್ಯ ಅವರು ಸಮರ್ಥವಾಗಿ ಸಮಿತಿಯ ಯೋಜನೆ ಕಾರ್ಯಗತವಾಗಲು ಶ್ರಮಿಸಿದ್ದಾರೆ. ನಮ್ಮ ಪ್ರಾರ್ಥನೆಯನ್ನು ಒಪ್ಪಿ 'ಸಂಶೋಧನ' ಗೌರವ ಸಂಪುಟದ ಸಂಪಾದಕತ್ವದ ಗುರುತರ ಜವಾಬ್ದಾರಿಯನ್ನು ಹೊತ್ತ ಲಕ್ಷ್ಮಣ ತೆಲಗಾವಿ ತಮ್ಮದೇ ಪುಸ್ತಕ ವೆನ್ನುವಂತೆ ಶ್ರಮಿಸಿದ್ದಾರೆ. 'ಕ್ರಿಯಾಚೇತನ' ಸವಿನೆನಪಿನ ಸಂಚಿಕೆಯ ಸಂಪಾದಕರಾದ ಡಾ. ಸಿ. ಯು. ಮಂಜುನಾಥ್ ಸಂಪಾದಕರಾಗಿ, ಸಂಚಾಲಕರಾಗಿ, ಕಾರ್ಯಕರ್ತರಾಗಿ ಶ್ರಮಿಸಿದ್ದಾರೆ. ಈ ಎರಡು ವರ್ಷದ ಅವಧಿ ಯಲ್ಲಿ 20ಕ್ಕೂ ಹೆಚ್ಚು ಸಭೆಗಳಲ್ಲಿ ಪಾಲ್ಗೊಂಡ ಪದಾಧಿಕಾರಿಗಳು ಹಲವು ಸಲಹೆ

ನೀಡಿದ್ದಾರೆ. ಗುರಿ ಮುಟ್ಟಲು ಅವರದೆ ಆದ ರೀತಿಯಲ್ಲಿ ಶ್ರಮಿಸಿದ್ದಾರೆ. ಅದನ್ನು ಹೇಳಹೊರಟರೆ ಅದೇ ದೊಡ್ಡ ಲೇಖನವೇ ಆದೀತು.

ಯಾವುದೇ ಯೋಜನೆಯನ್ನು ಹಮ್ಮಿಕೊಳ್ಳುವುದು ಸುಲಭ ಆದರೆ ಅದು ಕಾರ್ಯಗತವಾಗಲು ಬಹಳ ಜನರ ಶ್ರಮ, ತ್ಯಾಗ ಮತ್ತು ಶ್ರದ್ಧೆಗಳು ಅತ್ಯಗತ್ಯ. ಅಂತಹ ಬಹು ದೊಡ್ಡ ತಂಡವೇ ಈ ಯೋಜನೆಯ ಹಿಂದಿದೆ. ಎಲ್ಲರ ಹೆಸರು ಹೇಳುವುದು ಸಾಧ್ಯವಿಲ್ಲ. ನಿರಂತರವಾಗಿ ಶ್ರಮಿಸಿದ ಕೆಲವರ ಹೆಸರು ಹೇಳದಿದ್ದರೆ ಅಸೌಜನ್ಯವಾಗುತ್ತದೆ. ಎಲ್ಲ ಹಂತದಲ್ಲಿಯೂ ವಿಚಾರಿಸಿ ಪ್ರೋತ್ಸಾಹಕ ನೆರವು ನೀಡಿದ ಡಾ. ಎಂ. ಎಂ. ಕಲ್ಬುರ್ಗಿ, ಸಿ. ಚಂದ್ರಶೇಖರ, ಹಣ ಜಾಹಿರಾತು ಸಂಗ್ರಹ ಮತ್ತು ಇತರ ಕಾರ್ಯಗಳಲ್ಲಿ ಶ್ರಮಿಸಿರುವ ಬಾ. ಹ. ಉಪೇಂದ್ರ, ಜೆ. ಆರ್. ಪರೇರಾ, ಜಿ. ಸಿ. ನಾರಾಯಣ, ಬೆ. ರಾ. ನಾಗರಾಜ್, ಎಚ್. ಎನ್. ರಮೇಶಬಾಬು, ಹೊಸೂರು ನಾಗರಾಜು, ಇಂದಿರಾ ಹೆಗ್ಗಡೆ, ಅಮೃತ ನಾರಾಯಣ, ಭದ್ರಯ್ಯ, ಸತ್ಯನಾರಾಯಣ, ಗ. ನಾಗರಾಜು, ಶ್ರೀಕಂಠಯ್ಯ, ಎಚ್. ವಿ. ಗುಂಡಣ್ಣ, ಕಿ. ರಾಮಚಂದ್ರ, ರಾ. ಪ್ರಭುಶಂಕರ, ಜಿ. ವಿ. ಶಿವಸ್ವಾಮಿ, ಮಂಜುಳಾಂಬ, ನಾಗರಾಜಯ್ಯ 'ಪ್ರಯೋಗರಂಗ'ದ ಮಿತ್ರರು, ತುಮಕೂರಿನ ಶ್ಯಾಮಸುಂದರ ಕೋಚಿ, ಎನ್. ಶಿವರುದ್ರಯ್ಯ ಶಿವಮೊಗ್ಗೆಯ ಪ್ರೊ. ಎಸ್. ಪಂಚಾಕ್ಷರಿ, ಕೆ. ವಾಸುದೇವಾಚಾರ್, ಬಳ್ಳಿಕೆರೆ ಹನುಮಂತಪ್ಪ, ಧಾರವಾಡದ ಎಂ. ಎಂ. ಕಲ್ಬುರ್ಗಿ, ಬಿ. ಆರ್. ಹಿರೇಮಠ, ಬೆಳಗಾವಿಯ ರಾಘವೇಂದ್ರ ಜೋಶಿ ತಕ್ಷಣಕ್ಕೆ ನೆನಪಿಗೆ ಬರುತ್ತಿರುವರು. ಇಲ್ಲಿ ಹೆಸರಿಲ್ಲದ ಹಲವರು ಈ ಯೋಜನೆಯಲ್ಲಿ ಶ್ರಮಿಸಿದ್ದಾರೆ. ಹೆಸರಿಸದೇ ಹೋದರೂ ಅವರ ಶ್ರಮ ನಮ್ಮ ಮನಸ್ಸಿನಿಂದ ಮರೆಯಾಗುವುದಿಲ್ಲ.

ನಾವು ನಿರೀಕ್ಷಿಸಿದಂತೆ ಉತ್ತಮ ಗೌರವ ಸಂಪುಟ 'ಸಂಶೋಧನ' ಬಂದಿದೆ ಎಂದು ನಂಬಿದ್ದೇವೆ. ಈ ಎರಡು ವರ್ಷದ ಕಾಲಮಿತಿಯಲ್ಲಿ ಕೆಲಸ ಪೂರೈಸಿದ ತೃಪ್ತಿ ನಮಗಿದೆ. 'ಸಂಶೋಧನ' ಮತ್ತು 'ಕ್ರಿಯಾಚೇತನ'ಗಳನ್ನು ಕನ್ನಡದ ಶ್ರೇಷ್ಠ ವಿದ್ವಾಂಸ, ಕನ್ನಡ ಪರ ಹೋರಾಟಗಾರ ಎಲ್ಲಕ್ಕೂ ಮಿಗಿಲಾಗಿ ಮಾನವತಾವಾದಿ ಕನ್ನಡ ಜಂಗಮ ಡಾ. ಎಂ. ಚಿದಾನಂದ ಮೂರ್ತಿಯವರಿಗೆ ಅವರ ಎಲ್ಲ ಅಭಿಮಾನಿಗಳ ಶಿಷ್ಯರ, ಸ್ನೇಹಿತರ ಪರವಾಗಿ ಸಮಿತಿ ಅರ್ಪಿಸುತ್ತಿದೆ. ಈ ಸಮಾರಂಭದಲ್ಲಿ ಪಾಲ್ಗೊಂಡ ನೀವೆಲ್ಲ ನಮ್ಮ ಶ್ರಮ ಪೂರ್ಣ ಕೆಲಸವನ್ನು ಮೆಚ್ಚುತ್ತೀರಿ ಎಂದು ನಂಬಿದ್ದೇನೆ.

ನಮ್ಮ ಬಿನ್ನಹವನ್ನು ಗೌರವಿಸಿ ಜಾಹೀರಾತು ನೀಡಿದ ಎಲ್ಲರಿಗೆ ಸಮಿತಿಯು ಕೃತಜ್ಞತೆಗಳನ್ನು ಅರ್ಪಿಸುತ್ತದೆ. ಅಂದವಾಗಿ ಮುದ್ರಿಸಿಕೊಟ್ಟಿರುವ ನೇತ್ರಾ ಪ್ರಿಂಟರ್‍ಸ್‌ನ ಮಾಲಿಕರಾದ ಮುನಿಧರ್ಮಯ್ಯ ಮತ್ತು ಅಲ್ಲಿನ ನೌಕರ ವರ್ಗಕ್ಕೆ ಸಮಿತಿಯು ವಂದನೆಗಳನ್ನು ಸಲ್ಲಿಸುತ್ತದೆ.

**ರಾ. ನಂ. ಚಂದ್ರಶೇಖರ**
**ಕೆ. ವಿ. ನಾಗರಾಜಮೂರ್ತಿ**
**ಎಚ್. ಜಯಮ್ಮ ಕರಿಯಣ್ಣ**

# ಸಂಪಾದಕನ ಕೆಲವು ಮಾತುಗಳು

ಡಾ॥ ಎಂ. ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭದ ಸವಿನೆನಪಿಗಾಗಿ ಹೊರತರುತ್ತಿರುವ 'ಕ್ರಿಯಾಚೇತನ' ಸಂಚಿಕೆಯ ಮೂಲ ಯೋಜನೆ ದಿ॥ ಎಂ. ವಿ. ಸೀತಾರಾಮಯ್ಯನವರ ಅಧ್ಯಕ್ಷತೆಯ ಸಭೆಯಲ್ಲಿ ರೂಪುಗೊಂಡದ್ದು. ಅಭಿನಂದನ ಸಂಪುಟ 'ಸಂಶೋಧನ' ವಿಶೇಷವಾಗಿ ಸಂಶೋಧನ ಲೇಖನಗಳಿಗೆ ಮೀಸಲಿರಬೇಕೆಂದೂ ಸವಿನೆನಪಿನ ಸಂಚಿಕೆ 'ಕ್ರಿಯಾಚೇತನ' ಕನ್ನಡ ಪರವಾದ ಲೇಖನಗಳಿಗೆ ಒತ್ತು ಕೊಡಬೇಕೆಂಬ ಸ್ಥೂಲ ಚೌಕಟ್ಟನ್ನು ಹಾಕಲಾಗಿತ್ತು. ಒಂದು ಸಭೆಯಲ್ಲಿ ದಿ॥ ಎಂ.ವಿ.ಸೀ. ಅವರು ಕ್ರಿಯಾಚೇತನದ ಸಂಪಾದಕರಾಗಿ ಕಾರ್ಯನಿರ್ವಹಿಸುವಂತೆ ನನ್ನನ್ನು ಕೇಳಿದರು. ನನಗೆ ಆ ಕ್ಷೇತ್ರದಲ್ಲಿರುವ ಅನುಭವರಾಹಿತ್ಯವನ್ನು ಹೇಳಿ ಮೃದುವಾಗಿ ನಿರಾಕರಿಸಿದೆ. ಆದರೆ ಗುರುವರ್ಯ ಎಂ.ವಿ.ಸೀ. ಅವರ ಮತ್ತು ಸಭೆಯಲ್ಲಿದ್ದ ಕೆಲವು ಸ್ನೇಹಿತರ ಒತ್ತಾಯದಿಂದ ನನಗೆ ಅಷ್ಟಾಗಿ ಪ್ರವೇಶವಿಲ್ಲದ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುವ ಸಾಹಸವನ್ನು ಮಾಡಿದ್ದೇನೆ.

ಡಾ॥ ಎಂ. ಚಿದಾನಂದಮೂರ್ತಿಯವರು ನಾನು ಪೂಜ್ಯ ಭಾವನೆಯನ್ನು ಇಟ್ಟುಕೊಂಡಿರುವ ಪ್ರಿಯ ಗುರುವರ್ಯರು. ಅವರು ನನ್ನಂತೆ ಹಲವರನ್ನು ರೂಪಿಸಿದ ಶಿಲ್ಪಿಗಳು. ಅವರ ಅಭಿನಂದನ ಕಾರ್ಯದಲ್ಲಿ ಸಂಪಾದಕ ಸಾಹಸದ ಮೂಲಕ ಭಾಗಿಯಾಗುತ್ತಿರುವುದು ನನಗೆ ಅತ್ಯಂತ ಸಂತೋಷವನ್ನು ತಂದಿದೆ. ನಮ್ಮ ಗುರುವರ್ಯರಿದ್ದ ಕಡೆ ಸದಾ ಜೀವಂತಿಕೆ, ಚೈತನ್ಯ ತಾನೇ ತಾನಾಗಿರುತ್ತದೆ. ನಿರಂತರ ಕ್ರಿಯಾಶೀಲ, ಸತ್ಯನಿಷ್ಠ, ಪರಿಪಕ್ವ, ಮಾನವೀಯ ಚೈತನ್ಯಶೀಲ ಗುಣಗಳುಳ್ಳ ಅವರಿಗೆ ಅರ್ಥಪೂರ್ಣ ಅರವತ್ತು ವರ್ಷಗಳು ತುಂಬಿದ ಈ ಘಟ್ಟದಲ್ಲಿ ಹೊರತರುತ್ತಿರುವ ಈ ಸಂಚಿಕೆ ವಿಶೇಷವಾಗಿ ಅರ್ಥಪೂರ್ಣವಾಗಿದೆ.

ಈ ಸಂಚಿಕೆಯಲ್ಲಿ ಗುರುವರ್ಯರನ್ನು ಕುರಿತ ಮೂರು ಲೇಖನಗಳು ಅವರ ವ್ಯಕ್ತಿತ್ವದ ಕೆಲವು ಮುಖಗಳನ್ನು ಪರಿಚಯಿಸುತ್ತವೆ. ಅವು ಅವರ ಹಳೆಯ ಮತ್ತು ಇತ್ತೀಚಿನ ವರ್ಷದ ವಿದ್ಯಾರ್ಥಿಗಳಿಂದ ರಚಿತವಾದವು. ಉಳಿದ ಲೇಖನಗಳು ಕನ್ನಡದ ಚಳವಳಿ, ಆಡಳಿತ, ಶಿಕ್ಷಣ ಮಾಧ್ಯಮ, ಜಾಗೃತಿ, ಸಂಘ ಸಂಸ್ಥೆಗಳು ಮುಂತಾದ ವಿಷಯಗಳಿಗೆ ಸಂಬಂಧಿಸಿದವು. ಇವುಗಳೆಲ್ಲ ಕಳೆದ 10–12 ವರ್ಷಗಳಿಂದ ನಮ್ಮ ಪ್ರಿಯ ಗುರುಗಳ ಎಲ್ಲ ಸತ್ವವನ್ನು ವಿಶೇಷವಾಗಿ ತೊಡಗಿಸಿಕೊಂಡ ವಿಷಯಗಳಾಗಿವೆ. ಅವು ಅವರಿಗೆ ನಿರಂತರ ಕಾಡುವ ವಿಷಯಗಳಾಗಿರುವಂತೆಯೇ ನಮ್ಮ ಈ ಸಂಚಿಕೆಯ ಚೌಕಟ್ಟಿಗೆ ವಿಶೇಷವಾಗಿ ಹೊಂದುತ್ತವೆ. ಕೆಲವು ಲೇಖನಗಳ ಬರಹಗಾರರು ಬರವಣಿಗೆಯ ಕ್ಷೇತ್ರಕ್ಕೆ ಪೂರ್ಣ ಹೊಸಬರೂ ಆಗಿದ್ದಾರೆ. ಎಲ್ಲ ಲೇಖನಗಳೂ ತಮ್ಮ

ಮುಂದೆಯೇ ಇವೆ. ಲೇಖನಗಳನ್ನು ಸಕಾಲದಲ್ಲಿ ಒದಗಿಸಿಕೊಟ್ಟು ಸಹಕರಿಸಿದ ಎಲ್ಲ ಲೇಖಕರಿಗೆ ಪ್ರೀತಿಯ ಕೃತಜ್ಞತೆಗಳು.

ಈ ಸಂಚಿಕೆಯಲ್ಲಿ ಸಾಕಷ್ಟು ಹೆಚ್ಚಿನ ಛಾಯಾಚಿತ್ರಗಳನ್ನು ಅಳವಡಿಸುವ ಮೂಲಕ ಗುರುವರ್ಯರ ಕೆಲವು ಘಟ್ಟದ ಜೀವನವನ್ನು ಚಿತ್ರಮಯವಾಗಿ ಸೆರೆಹಿಡಿಯುವ ಪ್ರಯತ್ನವನ್ನು ಮಾಡಲಾಗಿದೆ. ಈ ವಿಷಯದಲ್ಲಿ ವಿಶೇಷ ನೆರವು ನೀಡಿರುವ ಶ್ರೀ ಲಕ್ಷ್ಮಣ ತೆಲಗಾವಿಯವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ಈ ಸಂಚಿಕೆಯನ್ನು ಹೊರತರುವಲ್ಲಿ ಅಭಿನಂದನ ಸಮಿತಿಯ ಅಧ್ಯಕ್ಷರಾದ ಡಾ|| ಸಾ. ಶಿ. ಮರುಳಯ್ಯನವರು ಮುದ್ರಣ, ಸಂಪಾದನಗಳಿಗೆ ಸಂಬಂಧಿಸಿದಂತೆ ಅನೇಕ ವಿಷಯಗಳನ್ನು ತಿಳಿಸಿಕೊಟ್ಟಿದ್ದಾರೆ. ಅಂತೆಯೇ ನನ್ನೊಂದಿಗೆ ಉತ್ಸಾಹದಿಂದ ಕಾರ್ಯನಿರ್ವಹಿಸಿರುವ ರಾ. ನಂ. ಚಂದ್ರಶೇಖರ ಅವರ ಸಹಕಾರ ದೊಡ್ಡದು.

ಈ ಸಂಚಿಕೆ ಮೈತುಂಬಿಕೊಳ್ಳಲು ಜಾಹೀರಾತುಗಳು ನೆರವಾಗಿರುವಂತೆಯೇ ಆರ್ಥಿಕವಾಗಿಯೂ ಅಭಿನಂದನ ಸಮಿತಿಯ ಹಣಕಾಸಿನ ಸ್ಥಿತಿ ಸ್ವಲ್ಪ ಮೈತುಂಬಿ ಕೊಳ್ಳಲು ನೆರವಾಗಿರುವ ನಮ್ಮ ಎಲ್ಲ ಜಾಹೀರಾತುದಾರರಿಗೆ ಪ್ರೀತಿಯ ಕೃತಜ್ಞತೆಗಳು.

ಬೇರೆ ಬೇರೆ ವೈಯಕ್ತಿಕ ಕಾರ್ಯಗಳ ಒತ್ತಡಗಳಿದ್ದರೂ, ನಾವು ಕೊಟ್ಟ ತೊಂದರೆಗಳನ್ನು ತಾಳಿಕೊಂಡು ಉತ್ತಮವಾದ ರಕ್ಷಾಪುಟವನ್ನು ವಿನ್ಯಾಸ ಗೊಳಿಸಿ ಕೊಟ್ಟಿರುವ ಕಲಾವಿದ ಶ್ರೀ ಸಿ. ಚಂದ್ರಶೇಖರ ಅವರನ್ನು ಈ ಸಂದರ್ಭದಲ್ಲಿ ಪ್ರೀತಿ ಯಿಂದ ನೆನೆಯುತ್ತೇನೆ.

ಅಭಿನಂದನ ಸಮಿತಿ ಜನ್ಮತಾಳಿದಾಗಿನಿಂದ ಮುದ್ರಣದ ಅನೇಕಾನೇಕ ಕಾರ್ಯ ಗಳನ್ನು ಪ್ರೀತಿ ವಿಶ್ವಾಸಗಳಿಂದ ಮಾಡಿಕೊಟ್ಟಿರುವ ಶ್ರೀ ಮುನಿಧರ್ಮಯ್ಯನವರ ಸ್ನೇಹ ಮಾತಿಗೆ ನಿಲುಕದ್ದು. ಕ್ರಿಯಾಚೇತನವನ್ನು ನಮ್ಮ ಅವಸರ ಮತ್ತು ಒತ್ತಡಗಳ ಮಧ್ಯವೂ ಸುಂದರವಾಗಿ ಮುದ್ರಿಸಿಕೊಟ್ಟಿರುವ ನೇತ್ರಾ ಮುದ್ರಣಾಲಯದ ಶ್ರೀ ಮುನಿಧರ್ಮಯ್ಯನವರಿಗೆ ಮತ್ತು ಸಿಬ್ಬಂದಿಯವರಿಗೆ ನಮ್ಮ ವಂದನೆಗಳು.

ಅಭಿನಂದನ ಸಮಿತಿ ನನ್ನ ಮೇಲೆ ಸಂಪಾದಕತ್ವದ ಜವಾಬ್ದಾರಿಯನ್ನು ಹೊರಿಸಿ ನನಗೆ ಕೆಲವು ಮಟ್ಟಿಗೆ ಸಂಪಾದಕತ್ವದ ಅನುಭವ ದೊರೆಯುವಂತೆ ಮಾಡಿದೆ. ಅಲ್ಲದೆ ನನ್ನ ಪೂಜ್ಯ ಗುರುವರ್ಯರ ಅಭಿನಂದನ ಕಾರ್ಯದಲ್ಲಿ ತೊಡಗಿಕೊಳ್ಳುವ ಒಂದು ಸಂತೋಷದಾಯಕ ಅನುಭವ ಲಾಭಕ್ಕಾಗಿ ಅಭಿನಂದನ ಸಮಿತಿಗೆ ವಿಶೇಷವಾಗಿ ಋಣಿ ಯಾಗಿದ್ದೇನೆ.

ನನಗೆ ಕಣ್ಣಿಗೆ ತೊಂದರೆಯಾಗಿದ್ದ ಕೆಲವು ದಿನಗಳ ಕಾಲ ಕರಡಚ್ಚನ್ನು ತಿದ್ದುವ ಕಾರ್ಯದಲ್ಲಿ ನೆರವಾದ ನನ್ನ ಶ್ರೀಮತಿ ಎಂ. ಎಸ್. ಸುಜಯ ಅವರ ಸಹಕಾರವನ್ನು ನೆನೆಯುತ್ತೇನೆ. ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಂಪಾದನ ಕಾರ್ಯದಲ್ಲಿ ನೆರವಾದ ಎಲ್ಲರಿಗೆ ನನ್ನ ವಂದನೆಗಳು.

29-7-1991
ಬೆಂಗಳೂರು

**ಸಿ. ಯು. ಮಂಜುನಾಥ್**

ಚಿತ್ತರಗಿ ಶಿವಾನುಭವ ಚರವರ್ಯರು, ಮಹಾಂತಜೋಳಿಗೆಯ ಶಿವಶಿಲ್ಪಿ
ಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳು ಚಿತ್ತರಗಿ ಇಳಕಲ್ಲ

**ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳು**
ಚಿತ್ತರಗಿ ಸಂಸ್ಥಾನ ಮಠ, ಇಳಕಲ್ಲ-೫೮೭ ೧೨೫ ದಿನಾಂಕ : ೧೯-೫-೯೧

# ಶುಭ ಸಂದೇಶ

ಡಾ॥ ಎಂ. ಚಿದಾನಂದ ಮೂರ್ತಿಯವರು ನಮ್ಮ ನಾಡಿನ ಹೆಸರಾಂತ ಸಂಶೋಧಕರು ವಚನಸಾಹಿತ್ಯ ಚಿಂತನಶೀಲರು. ವಿಶ್ವಗುರು ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಜನಸಮುದಾಯದ ಹೃದಯ ಭಾಷೆಯಾದ ಕನ್ನಡವನ್ನು ತನ್ನ ಧರ್ಮಕ್ಕೆ-ಅನುಭವ ಸಾಹಿತ್ಯಕ್ಕೆ ಹೃದಯಭಾಷೆಯಾಗಿಸಿಕೊಂಡವರು. ದೇವಭಾಷೆ ಎನಿಸಿಕೊಂಡಿದ್ದ ಸಂಸ್ಕೃತವು ಕೇವಲ ಪಂಡಿತ ವರ್ಗಕ್ಕೆ ಸೀಮಿತವಾಗಿ ಉಳಿದ ಕಾಲದಲ್ಲಿ, ಜನಪದ ಬದುಕಿನ ಜೀವಾಳವಾದ ಕನ್ನಡ ಭಾಷೆಯನ್ನು ಮಂತ್ರವಾಗಿಸಿಕೊಂಡು ವಚನ ಸಾಹಿತ್ಯವನ್ನು ನೀಡಿದರು. ಜನ ಮಾನಸದಲ್ಲಿ ಸ್ವಾಭಿಮಾನ ಮೂಡಿಸಿದರು.

ಬಸವಾದಿ ಶರಣರ ಈ ಕಾರ್ಯದ ಬಳಿವಿಡಿದು ಇಂದು ಇಪ್ಪತ್ತನೆಯ ಶತಮಾನದಲ್ಲಿ ಕ್ರಾಂತಿಕಾರಿ ಮನೋಭಾವನೆಯ ಡಾ॥ ಎಂ. ಚಿದಾನಂದಮೂರ್ತಿಯವರು ಕನ್ನಡ ಶಕ್ತಿ ಕೇಂದ್ರದ ಮೂಲಕ ಕನ್ನಡ ಭಾಷೆಯ ಸರ್ವಾಂಗೀಣ ಉನ್ನತಿ-ಪ್ರಗತಿಗಾಗಿ, ಅದರ ಉಳಿವು-ಬೆಳವಿಗೆಗಾಗಿ ಹೋರಾಟಮಾಡುತ್ತಿರುವುದು ನಮಗೆಲ್ಲ ಸಂತಸವನ್ನಿತ್ತಿದೆ. ಡಾ॥ ಚಿದಾನಂದ ಮೂರ್ತಿಯವರು ನಾಡು-ನುಡಿಗಾಗಿ, ನಾಡಿನ ಧರ್ಮ-ಸಂಸ್ಕೃತಿ-ಪರಂಪರೆಯ ಭವಿತವ್ಯಕ್ಕಾಗಿ ಸಲ್ಲಿಸುತ್ತಿರುವ ಸೇವೆ ಅನುಪಮವಾದುದು.

ಡಾ॥ ಎಂ. ಚಿದಾನಂದಮೂರ್ತಿಯವರನ್ನು ಸನ್ಮಾನಿಸುವ ಕಾರ್ಯವೆಂದರೆ ಕನ್ನಡ ನಾಡನ್ನು, ಮಾತೆಯನ್ನು, ಕನ್ನಡ ಜನತೆಯನ್ನು, ಕನ್ನಡ ಸಂಸ್ಕೃತಿಯನ್ನು, ಕನ್ನಡ ಅಂತಃಶ್ಚೇತನವನ್ನೇ ಗೌರವಿಸಿದಂತೆ. ಈ ಕಾರ್ಯ ಕೈಗೊಂಡಿರುವ ಅಭಿನಂದನ ಸಮಿತಿಯು ಅರ್ಹಕಾರ್ಯ ಮಾಡುತ್ತಿದೆ. ಡಾ॥ ಎಂ. ಚಿದಾನಂದಮೂರ್ತಿಯವರು ನೂರು ವರುಷಗಳ ಅರಿವು-ಆಚಾರ-ಅನುಭಾವಗಳ ಶರಣಜೀವನ ಬಾಳುವಂತಾಗಲಿ, ಅಪ್ಪ ಬಸವಣ್ಣನವರು, ಚಿತ್ತರಗಿ ಶ್ರೀ ವಿಜಯಮಹಾಂತ ಶಿವಯೋಗಿಗಳವರ ಕರುಣೆ ಸದಾಕಾಲ ಅವರಿಗಿರಲಿ ಎಂದು ಹೃದಯಾರೆ ಹಾರೈಸುವೆವು.

**ಶರಣು – ಶರಣಾರ್ಥಿ**

**ಸಿದ್ಧರಾಮ ಸ್ವಾಮೀಜಿ**
ಶಿವಬಸವ ನಗರ, ಬೆಳಗಾವಿ-೫೯೦ ೦೧೦

ದಿನಾಂಕ : ೨೭-೭-೯೧

# ಸಂದೇಶ

ಕನ್ನಡ ಸಾಹಿತ್ಯದಲ್ಲಿ ತಮ್ಮ ಪಾಂಡಿತ್ಯ, ಸಂಶೋಧನೆಗಳಿಂದ ಅಪೂರ್ವ ಸ್ಥಾನ ಪಡೆದಿರುವ ಡಾ॥ ಎಂ. ಚಿದಾನಂದಮೂರ್ತಿ ಅವರಿಗೆ ಅರವತ್ತು ವರ್ಷಗಳು ತುಂಬಿದ ಸಂದರ್ಭದಲ್ಲಿ ಅವರ ಸಮಸ್ತ ಅಭಿಮಾನಿಗಳು ಬೆಂಗಳೂರು ನಗರದಲ್ಲಿ ನಾಗರಿಕ ಸನ್ಮಾನವನ್ನೇರ್ಪಡಿಸಿರುವುದು ಅಭಿನಂದನೀಯ.

ಡಾ॥ ಎಂ. ಚಿದಾನಂದಮೂರ್ತಿಯವರು ನಮ್ಮ ನಾಡು ನುಡಿಗೆ ಸಲ್ಲಿಸಿದ ಸೇವೆ ಅಪೂರ್ವವಾದುದು. ಅವರಿಂದ ನಮ್ಮ ಕನ್ನಡ ಸಾಹಿತ್ಯ ಸಂಸ್ಕೃತಿ ಇನ್ನೂ ಶ್ರೀಮಂತಗೊಳ್ಳಲಿ. ಭಗವಂತನು ಅವರಿಗೆ ದೀರ್ಘಾಯುರಾರೋಗ್ಯ ಸಕಲ ಸಂಪದಗಳನ್ನು ನೀಡಲಿ ಎಂದು ಹಾರೈಸುವೆವು.

ಇತಿ ಶಿವಂ.

**Khurshed Alam Khan**
Governor of Karnataka
Raj Bhavan, Bangalore

Date : 1-8-1991

# Message

I am happy to note that Dr. M. Chidananda Murthy, noted Kannada literateur is being felicitated and a souvenir to commemorate this occasion is also being brought out.

I extend my hearty greetings to Dr. M. Chidananda Murthy and also the organisers and wish the programme a success.

**ಎಸ್. ಬಂಗಾರಪ್ಪ**
ಮುಖ್ಯ ಮಂತ್ರಿ
ಕರ್ನಾಟಕ ಸರ್ಕಾರ

ದಿನಾಂಕ : ೨೭-೭-೧೯೯೧

# ಸಂದೇಶ

ಕನ್ನಡ ಸಾರಸ್ವತ ಲೋಕದ ಹಿರಿಯ ಚಿಂತಕರೂ, ಸಂಶೋಧಕರೂ, ಸಜ್ಜನರೂ ಆದ ಡಾ॥ ಎಂ. ಚಿದಾನಂದಮೂರ್ತಿ ಅವರನ್ನು ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ ಆಗಸ್ಟ್ 3 ರಂದು ಸನ್ಮಾನಿಸುವ ಕಾರ್ಯಕ್ರಮವಿದೆ ಎಂದು ತಿಳಿದು ನನಗೆ ಸಂತೋಷವಾಗಿದೆ.

ಭಾಷಾ ವಿಜ್ಞಾನಿಗಳೂ, ಕನ್ನಡದ ಶ್ರೇಷ್ಠ ವಿದ್ವಾಂಸರೂ ಆದ ಡಾ॥ ಎಂ. ಚಿದಾನಂದ ಮೂರ್ತಿ ಅವರು ನಾಡು-ನುಡಿಗೆ ಅಪಾರ ಸೇವೆ ಸಲ್ಲಿಸಿದ್ದಾರೆ. ಕನ್ನಡ ಭಾಷೆ, ಸಂಸ್ಕೃತಿ ಮತ್ತು ಇತಿಹಾಸದ ಬಗ್ಗೆ ಶ್ರೀಯುತರು ನಡೆಸಿರುವ ಸಂಶೋಧನೆಗಳು ಹಲವಾರು ವಿಚಾರಗಳ ಮೇಲೆ ಬೆಳಕು ಚೆಲ್ಲಿವೆ. ಡಾ॥ ಮೂರ್ತಿ ಅವರನ್ನು ಅಭಿನಂದಿಸುವ ನಿಮ್ಮ ಸಮಾರಂಭ ಯಶಸ್ವಿಯಾಗಲಿ ಎಂದು ನಾನು ಆಶಿಸುತ್ತೇನೆ.

**ಎಂ. ವೀರಪ್ಪ ಮೊಯಿಲಿ**
ಶಿಕ್ಷಣ ಮತ್ತು ಸಂಸದೀಯ ವ್ಯವಹಾರಗಳ ಮಂತ್ರಿಗಳು
ಕರ್ನಾಟಕ ಸರಕಾರ

ದಿನಾಂಕ : ೨೫-೭-೯೧

# ಸಂದೇಶ

ಡಾ॥ ಎಂ. ಚಿದಾನಂದಮೂರ್ತಿಯವರನ್ನು ದಿನಾಂಕ 3-8-1991 ರಂದು ಸನ್ಮಾನಿಸುತ್ತಿರುವ ವಿಚಾರ ತಿಳಿದು ಬಹಳ ಸಂತೋಷವಾಯಿತು. ಉತ್ತಮ ವಾಗ್ಮಿ, ಸಂಶೋಧಕ, ವಿದ್ವಾಂಸರಾಗಿ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸುತ್ತಿರುವ ಡಾ॥ ಚಿದಾನಂದಮೂರ್ತಿಯವರು ಕನ್ನಡ ನಾಡು ನುಡಿಗಾಗಿ ದುಡಿಯುತ್ತಿರುವ ಮಹಾ ಚೇತನವಾಗಿದ್ದಾರೆ.

ಈ ಸಂದರ್ಭದಲ್ಲಿ ನನ್ನ ಹೃತ್ಪೂರ್ವಕ ಅಭಿನಂದನೆಗಳು.

**ಎಸ್. ರಮೇಶ್**
ಯುವಜನ ಸೇವೆ, ಕ್ರೀಡೆ
ಕನ್ನಡ ಮತ್ತು ಸಂಸ್ಕೃತಿ
ರಾಜ್ಯ ಸಚಿವರು
ಕರ್ನಾಟಕ ಸರಕಾರ

ದಿನಾಂಕ : ೨೭-೬-೧೯೯೧

# ಸಂದೇಶ

ಡಾ॥ ಎಂ. ಚಿದಾನಂದಮೂರ್ತಿಯವರು ಕನ್ನಡ ಸಂಶೋಧನ ಪ್ರಪಂಚದಲ್ಲಿ ಅದ್ವಿತೀಯವಾದ ಹೆಸರು. ಕನ್ನಡ ಭಾಷೆ, ಶಾಸನಗಳು ಹಾಗೂ ಕರ್ನಾಟಕ ಇತಿಹಾಸದ ಬಗ್ಗೆ ಆಳವಾಗಿ ಅಧ್ಯಯನ ನಡೆಸಿ ತಮ್ಮ ಅಮೂಲ್ಯ ಜ್ಞಾನವನ್ನು ಅಧ್ಯಾಪಕ ವೃತ್ತಿಯಿಂದ ಸಾವಿರಾರು ವಿದ್ಯಾರ್ಥಿಗಳಿಗೆ ಒದಗಿಸಿರುವ ಹಿರಿಯ ವಿದ್ವಾಂಸರಾದ ಇವರಿಗೆ 3-8-1991 ರಂದು ಬೆಂಗಳೂರಿನಲ್ಲಿ ಸನ್ಮಾನವನ್ನು ಏರ್ಪಡಿಸಿರುವುದು ಸಂತಸದ ಸಂಗತಿ.

ಈ ಸಂದರ್ಭದಲ್ಲಿ ಹೊರತರಲಾಗುತ್ತಿರುವ 'ಸಂಶೋಧನ' ಎಂಬ ಬೃಹತ್ ಸಂಪುಟ ಹಾಗೂ 'ಕ್ರಿಯಾಚೇತನ' ಎಂಬ ಸನ್ಮಾನ ಸಂಚಿಕೆಗಳು ಡಾ॥ ಮೂರ್ತಿಯವರ ಸನ್ಮಾನಕ್ಕೆ ಅನ್ವರ್ಥವಾಗಿವೆ.

ಈ ಸಮಾರಂಭದಿಂದ ಡಾ॥ ಮೂರ್ತಿಯವರ ಕನ್ನಡದ ಕೆಲಸವು ಇನ್ನೂ ಹುರುಪಿನಿಂದ ಸಾಗುವಂತಾಗಲಿ ಹಾಗೂ ಡಾ॥ ಮೂರ್ತಿಯವರಿಗೆ ಉತ್ತರೋತ್ತರ ಯಶಸ್ಸು ಲಭಿಸಲಿ ಎಂದು ಹೃತ್ಪೂರ್ವಕವಾಗಿ ಆಶಿಸುತ್ತೇನೆ.

# ಸಮಾರಂಭದ ಯಶಸ್ಸನ್ನು ಹಾರೈಸಿದ ಕೆಲವು ಪತ್ರ ಭಾಗಗಳು

ಶ್ರೀಯುತರು ಸಾಹಿತ್ಯ, ಇತಿಹಾಸ, ಜಾನಪದ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಸೇವೆಯನ್ನು ಗುರುತಿಸಿ ಅಭಿಮಾನಿಗಳು ಸನ್ಮಾನಿಸಲಿರುವುದು ಸ್ತುತ್ಯರ್ಹವಾದುದು. ಕನ್ನಡ ನಾಡು-ನುಡಿಯ ಬಗ್ಗೆ ಇವರಿಂದ ಇನ್ನೂ ಹೆಚ್ಚಿನ ಸೇವೆಯು ಲಭಿಸುವಂತಾಗಲೆಂದು ಆಶಿಸುತ್ತೇನೆ.

**ಡಿ. ವೀರೇಂದ್ರಹೆಗ್ಗಡೆಯವರು**
ಧರ್ಮಸ್ಥಳ

ಡಾ. ಚಿದಾನಂದಮೂರ್ತಿಯವರು ಹೆಸರಾಂತ ಸಾಹಿತಿಗಳು. ವಿವಿಧ ಕ್ಷೇತ್ರಗಳಲ್ಲಿ ಅಪಾರ ಸೇವೆಯನ್ನು ಸಲ್ಲಿಸಿರುತ್ತಾರೆ. ಇಂತಹವರ ಸೇವೆಯನ್ನು ಸ್ಮರಿಸಿ ಸನ್ಮಾನ ಮಾಡುತ್ತಿರುವುದು ಮೆಚ್ಚತಕ್ಕಂಥ ವಿಚಾರ. ಈ ಸಮಾರಂಭ ಯಶಸ್ವಿಯಾಗಿ ನಡೆಯಲಿ.

**ಎಚ್. ಡಿ. ದೇವೇಗೌಡ**
ಲೋಕಸಭಾ ಸದಸ್ಯರು

ವಿಶ್ವವಿದ್ಯಾಲಯದಲ್ಲಿ ಅಪೂರ್ವ ಸೇವೆ ಸಲ್ಲಿಸಿ ಸ್ಮರಣೀಯ ಸಂಶೋಧನೆ ಪ್ರಕಟಣೆಗಳನ್ನು ಹೊರತಂದು ಸಾಹಿತ್ಯ ಕ್ಷೇತ್ರಕ್ಕೆ ಸ್ಮರಣೀಯ ಸೇವೆ ಸಲ್ಲಿಸಿರುವ ಡಾ. ಎಂ. ಚಿದಾನಂದಮೂರ್ತಿಯವರಿಗೆ ಆಯುರಾರೋಗ್ಯ ಐಶ್ವರ್ಯಾದಿಗಳನ್ನು ದಯಪಾಲಿಸಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

**ಡಾ. ಕೆ. ಹನುಮಂತಪ್ಪ**
ಕುಲಪತಿ, ಬೆಂಗಳೂರು ವಿಶ್ವವಿದ್ಯಾಲಯ

ಡಾ. ಎಂ. ಚಿದಾನಂದಮೂರ್ತಿಯವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು. ಅಭಿನಂದನ ಸಮಾರಂಭವು ಯಶಸ್ವಿಯಾಗಲಿ ಎಂದು ಹಾರೈಕೆ.

**ಡಾ. ರಂ. ಶ್ರೀ. ಮುಗಳಿ**

ಡಾ. ಚಿದಾನಂದಮೂರ್ತಿ ನಮ್ಮ ನಾಡಿನ ಶ್ರೇಷ್ಠ ಸಂಶೋಧಕರಲ್ಲಿ ಒಬ್ಬರು. ಅವರ ಅಧ್ಯಯನ ಕ್ಷೇತ್ರ ಒಂದು ನಾಡಿನ ವಿವಿಧ ಮುಖಗಳನ್ನೆಲ್ಲ ಒಳಗೊಂಡು ಸಮಗ್ರ ನೋಟವನ್ನು ಖಚಿತವಾಗಿ ಸ್ಫುಟಗೊಳಿಸುವಂಥದು. ಈ ದಿಸೆಯಲ್ಲಿ ಅವರು ಮಾಡಿರುವ ಕಾರ್ಯ ಅಗಾಧವಾದದ್ದು, ಅಚ್ಚರಿಗೊಳಿಸುವಂಥದು. ಅವರ ಒಂದೊಂದು ಗ್ರಂಥವೂ ಒಂದೊಂದು ಅಮೂಲ್ಯ ಕಾಣಿಕೆ ; ಒಂದೊಂದು ಲೇಖನವೂ ಬೆಲೆಬಾಳುವ ದಾಖಲೆ.

ಅವರ ವ್ಯಕ್ತಿತ್ವದ ಇನ್ನೊಂದು ಮುಖ್ಯವಾದ ಮಹತ್ವವಾದ ಅಂಶವೆಂದರೆ ಕನ್ನಡ–ಕನ್ನಡಿಗ–ಕರ್ನಾಟಕ ಈ ಮೂರನ್ನು ಏಕೀಭವಿಸಿ ಅದರ ಅಭಿವೃದ್ಧಿಗಾಗಿ ಅವರು ಪಡುತ್ತಿರುವ ಪರಿಶ್ರಮ. ಕನ್ನಡ ಶಕ್ತಿ ಕೇಂದ್ರದ ಕಾರ್ಯಾಧ್ಯಕ್ಷರಾಗಿ ತಮ್ಮ ಕ್ರಿಯಾಚೇತನವನ್ನು ಅದಕ್ಕಾಗಿ ಮೀಸಲಿಟ್ಟಿರುವುದು ಅವರ ಬದುಕು ಬರಹವನ್ನು ಅರ್ಥಪೂರ್ಣವಾಗಿಸಿದೆಯೆಂದರೆ ಅತಿಶಯೋಕ್ತಿಯಾಗದು. ಈ ಸಂದರ್ಭದಲ್ಲಿ ಅವರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತ, ಸಮಾರಂಭ ಯಶಸ್ವಿಯಾಗಿ ನೆರವೇರಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

**ಚನ್ನವೀರಕಣವಿ**
ಧಾರವಾಡ

ನಮ್ಮ ಕಾಲದ ಘನ ವಿದ್ವಾಂಸರಲ್ಲಿ ಡಾ. ಮೂರ್ತಿ ಒಬ್ಬರೆಂಬುದು ನಿರ್ವಿವಾದ. ಅವರ ಕೆಲ ವಿಚಾರಗಳನ್ನು ನಾವು ಒಪ್ಪದೇ ಇರಬಹುದು ಆ ಮಾತು ಬೇರೆ. ಅವರು ಕೇವಲ ಸಂಶೋಧಕ, ಲೇಖಕರು ಮಾತ್ರವಲ್ಲ. ನಾಡು–ನುಡಿಯ ಏಳ್ಗೆಗಾಗಿ ಹೋರಾಟಕ್ಕಿಳಿದ ಓರ್ವ ಧೀಮಂತ. ಅಂಥವರ ಅಭಿನಂದನ ನಡೆಯುತ್ತಿರುವುದು ಸ್ತುತ್ಯ ಮತ್ತು ಯೋಗ್ಯ.

**ಡಾ. ಪಂಚಾಕ್ಷರಿ ಹಿರೇಮಠ**
ಧಾರವಾಡ

ಡಾ. ಎಂ. ಚಿದಾನಂದಮೂರ್ತಿಯವರು ಶತಾಯುಷಿಗಳಾಗಿ ಬಾಳಿ ತಮ್ಮ ಅರವತ್ತರ ದಶಕದಲ್ಲಿ ಹಿಂದೆಂದಿಗಿಂತಲೂ ಹೆಚ್ಚಿನದಾದ ಅನುಭವದ ಅಮೃತವನ್ನು ನೀಡಿ ಕನ್ನಡ ನಾಡಿನ ಕಣ್ಮಣಿಯಾಗಿ ಬೆಳಗಲಿ ಎಂದು ಹಾರೈಸುತ್ತೇನೆ.

**ಶ್ರೀ ಷ. ಬ್ರ. ಡಾ. ಸಿದ್ಧರಾಮ ಶಿವಾಚಾರ್ಯ ಮಹಾಸ್ವಾಮಿಗಳು**
ಕೌಳೂರ ಸಂಸ್ಥಾನ ಬೃಹನ್ಮಠ, ಇಳಕಲ್ಲ

ಧೀರೋದಾತ್ತ ಸಾಹಿತಿಗಳು, ಪ್ರಾಚೀನ ಸಾಹಿತ್ಯ ಸಂಶೋಧಕರು ಹಾಗೂ ಅತ್ಯುತ್ತಮ ಲೇಖಕರು ಆದ ಡಾ. ಮೂರ್ತಿಯವರಿಗೆ ಅರವತ್ತು ವರ್ಷಗಳು ತುಂಬಿದ ಸಂದರ್ಭದಲ್ಲಿ ಅವರ ಸಮಸ್ತ ಅಭಿಮಾನಿಗಳು ನಡೆಸುತ್ತಿರುವ ಪ್ರೀತಿಯ ಸಮಾರಂಭ ಯಶಸ್ವಿಯಾಗಲಿ.

**ಶ್ರೀ ಷ. ಬ್ರ. ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು**
ಹಿರೇಕಲ್ಮಠ, ಹೊನ್ನಾಳಿ

ಚಿದಾನಂದಮೂರ್ತಿಯವರು ಸಾಹಿತ್ಯ, ಭಾಷಾ, ಸಂಶೋಧನ ಕ್ಷೇತ್ರದಲ್ಲಿ ಸದಾ ದುಡಿದು 'ಅರವತ್ತರ ಐಸಿರಿಯಲ್ಲಿ' ಪ್ರವೇಶ ಮಾಡುತ್ತಿರುವುದು, ಹಾಗೂ ಸಂಶೋಧನ ಗ್ರಂಥ ಬಿಡುಗಡೆ ಮಾಡುವುದು ಸಂತಸ. ಪೂಜ್ಯರ, ಪಂಡಿತರ ಮಧ್ಯದಲ್ಲಿ ಸಭೆ ನಡೆಯುವುದು ಕಬ್ಬಿನ ಮೇಲೆ ಜೇನು ಇಟ್ಟಂತೆ. ಸರ್ವಕಾರ್ಯಕ್ರಮ ವೈಭವದಿಂದ ನಡೆಯಲಿ ಎಂದು ಹಾರೈಸುತ್ತೇವೆ.

**ಶ್ರೀ ಮ. ನಿ. ಪ್ರ. ರೇವಣ ಸಿದ್ಧ ಮಹಾಸ್ವಾಮಿಗಳು**
ಗದ್ದುಗೆ ಮಠ, ಕಲಬುರ್ಗಿ

ಡಾ. ಚಿದಾನಂದಮೂರ್ತಿಯವರ ಅಭಿನಂದನ ಕಾರ್ಯವಿಟ್ಟುಕೊಂಡಿದ್ದಕ್ಕೆ ತುಂಬ ಆನಂದವಾಯಿತು. ಕನ್ನಡ ಘನ ಪಂಡಿತರಾಗಿರುವ ಡಾ. ಚಿದಾನಂದಮೂರ್ತಿಯವರು ಸಾಹಿತ್ಯ, ಭಾಷಾವಿಜ್ಞಾನ, ಇತಿಹಾಸ ಹಾಗೂ ಜಾನಪದ ಕ್ಷೇತ್ರಗಳಲ್ಲಿ ಅತ್ಯುನ್ನತ ಶಿಖರವನ್ನು ಏರಿದವರು. ಅವರ ಅಭಿನಂದನ ಸಮಾರಂಭವು ಸುಗಮವಾಗಿ ಸಾಗಲಿ, ಅವರಿಗೆ ಭಗವಂತನು ಹೆಚ್ಚಿನ ಆಯುರಾರೋಗ್ಯ ಸಂಪತ್ತನ್ನು ನೀಡಿ ಕಾಪಾಡಲಿ ಎಂದು ಶುಭ ಹಾರೈಸುತ್ತೇವೆ.

**ಶ್ರೀ ಮ. ನಿ. ಪ್ರ. ಸಿದ್ಧಪ್ರಭುಸ್ವಾಮಿಗಳು**
ಸಿದ್ಧ ಸಂಸ್ಥಾನ ಮಠ, ಚಿಂಚಣಿ
ಚಿಕ್ಕೋಡಿ ತಾಲ್ಲೂಕ್

ಡಾ. ಚಿದಾನಂದಮೂರ್ತಿ ಯಾವುದೇ ಕಾಲ, ಸಮಾಜ, ಸಮುದಾಯಗಳಿಗೂ ಗೌರವ ತರುವಂಥ ಮಹನೀಯರು. ಸ್ವತಃ ವಾಮನ ರೂಪಿಯಾಗಿದ್ದರೂ ತ್ರಿವಿಕ್ರಮ ಪ್ರಮಾಣದಲ್ಲಿ ಸಾಧನೆ ಮಾಡಿ, ಕನ್ನಡದ ಉಳಿವಿಗೆ, ಏಳಿಗೆಗೆ ಮಹೋನ್ನತ ಕಾಣಿಕೆ ಸಲ್ಲಿಸಿದ್ದಾರೆ. ಡಾ. ಮೂರ್ತಿಯವರನ್ನು ಗೌರವಿಸುವುದು ನಮ್ಮನ್ನು ನಾವೇ ಗೌರವಿಸಿಕೊಂಡಂತೆ. ಇಡೀ ಕನ್ನಡ ಸಮಾಜಕ್ಕೆ ಸನ್ಮಾನ ಪ್ರಾಪ್ತಿಯಾದಂತೆ.

**ಎಚ್. ಎಸ್. ಸೂರ್ಯನಾರಾಯಣ**
ಅಧ್ಯಕ್ಷ, ಚಿಕ್ಕಮಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು

ಡಾ. ಎಂ. ಚಿದಾನಂದಮೂರ್ತಿ ಅಭಿನಂದನ ಸಮಾರಂಭ ನಿಜಕ್ಕೂ ಸ್ತುತ್ಯರ್ಹ. ಅಗಾಧ ಪಾಂಡಿತ್ಯ, ಹೃದಯ ವೈಶಾಲ್ಯ, ಸಂಶೋಧನಾ ಅನುಭವಗಳು ಅವರ ಪ್ರತಿಭೆಗೆ ಜೀವಂತ ಸಾಕ್ಷಿ. ಕನ್ನಡ ನಾಡು–ನುಡಿಗೆ ಈ ಒಂದು ಹೃದಯಸ್ಪರ್ಶಿ ಸಮಾರಂಭ ಹೆಮ್ಮೆಯ ಸಂಕೇತ.

**ಅಯ್ಯಪ್ಪಯ್ಯ ಹುಡಾ**
ಅಧ್ಯಕ್ಷರು, ತಾಲೂಕಾ ಕನ್ನಡ ಸಾಹಿತ್ಯ ಪರಿಷತ್ತು
ರಾಯಚೂರು

ನಿಮ್ಮ ಸಂಶೋಧನ ಕೆಲಸ, ಭಾಷೆಯ ಪ್ರೀತಿ, ಕ್ರಿಯಾಚೇತನ ಎಲ್ಲವೂ ಇನ್ನಷ್ಟು ಸಮೃದ್ಧವಾಗಿ ನಡೆಯುವಂತೆ ನಿಮಗೆ ಆಯುಷ್ಯ, ಆರೋಗ್ಯ ಮಾನಸಿಕ ಶಾಂತಿಗಳು ಸಿಗಲಿ ಎಂದು ಈ ಸಂದರ್ಭದಲ್ಲಿ ಹಾರೈಕೆ.

**ಸಂತೋಷಕುಮಾರ ಗುಲ್ವಾಡಿ**
ಸಂಪಾದಕರು, ತರಂಗ, ಮಣಿಪಾಲ

ಕನ್ನಡ ನಾಡು ನುಡಿಗಳಿಗಾಗಿ ಸರ್ವಸ್ವವನ್ನೂ ಧಾರೆಯೆರೆದು ದುಡಿಯುತ್ತಿರುವ ಹಿರಿಯ ಚೇತನ ನಿಮ್ಮದು. ನಾಡಿನ ಅತ್ಯಂತ ಶ್ರೇಷ್ಠ ವಿದ್ವಾಂಸ ಹಾಗೂ ಸಾಹಿತಿಗಳಲ್ಲಿ ಒಬ್ಬರೂ ಆದ ನಿಮಗೆ ಅರವತ್ತು ತುಂಬಿದ ಶುಭ ಸಂದರ್ಭದಲ್ಲಿ ನಿಮ್ಮ–ಅಂದರೆ ಕನ್ನಡದ ಅಭಿಮಾನಿಗಳು ಅಭಿನಂದನ ಸಮಾರಂಭ ಏರ್ಪಡಿಸಿರುವುದು ಕೇಳಿ ಸಂತೋಷವಾಯಿತು.

**ಚದುರಂಗ**
(ಎಂ. ಸುಬ್ರಹ್ಮಣ್ಯರಾಜ ಅರಸು) ಮೈಸೂರು

ಡಾ. ಚಿದಾನಂದಮೂರ್ತಿಗಳ ವಿದ್ವತ್ತು ಅಪೂರ್ವವಾದಂತೆಯೇ ವ್ಯಕ್ತಿತ್ವವೂ ಅಪೂರ್ವ. ಸಂಶೋಧನೆಯಲ್ಲಿ ಅವರ ಮನಸ್ಸು ತೊಡಗಿದಂತೆಯೇ ಕನ್ನಡ ಜಡ ಜನತೆಯ ಕಲ್ಯಾಣದಲ್ಲಿಯೂ ತೊಡಗಿದೆ ; ಶಾಸನಗಳನ್ನು ಓದುವಂತೆಯೇ ಜನತೆಯ ಹಂಬಲಗಳನ್ನೂ ಓದುತ್ತಾರೆ. ಗತಕಾಲದಲ್ಲಿ ಗಾಢವಾದ ಆಸಕ್ತಿ ಇರುವಂತೆಯೇ ಭವಿಷ್ಯದ ಕಲ್ಯಾಣದಲ್ಲಿಯೂ ಆಸಕ್ತಿ ಇದೆ. ಅರವತ್ತು ವಸಂತಗಳನ್ನು ಕಂಡು, ವಿದ್ವತ್ತು ಅನುಭವಗಳನ್ನೂ ಬಳಸಿಕೊಂಡು ಉತ್ಸಾಹವನ್ನು ಕಳೆದುಕೊಳ್ಳದ ಕನ್ನಡ ನಾಡಿನ ಸೇವೆಗೆ ಮುಡಿಪಾದ ಈ ಮಿತ್ರರು ಬಹುಕಾಲ ಬಾಳಲಿ, ಆರೋಗ್ಯ ಸಂತೋಷ–ಯಶಸ್ಸುಗಳು ಅವರ ಹೆಜ್ಜೆಗಳನ್ನು ಬೆಳಗಲಿ ಎಂದು ಹಾರೈಸುತ್ತೇನೆ.

**ಎಲ್. ಎಸ್. ಶೇಷಗಿರಿರಾವ್**
ಬೆಂಗಳೂರು

ಕರ್ನಾಟಕ – ಕನ್ನಡ ಕನ್ನಡಿಗರ ಆಶೋತ್ತರಗಳ ಚೇತನ ಮೂರ್ತಿಯಾಗಿ, ತಮ್ಮನ್ನು ಈ ಹೋರಾಟಕ್ಕೆ ಸಮರ್ಪಿಸಿಕೊಂಡು ಗೆಳೆಯರ ಬಳಗವನ್ನು ಕಟ್ಟಿಕೊಂಡು, ಕನ್ನಡದ ಶಕ್ತಿ ಸಂವರ್ಧನೆಗೆ ನಿರಂತರ ಪ್ರಯತ್ನ ಶೀಲರಾಗಿರುವ ನನ್ನ ಸಹಪಾಠಿ ಮಿತ್ರ ಡಾ. ಎಂ. ಚಿದಾನಂದಮೂರ್ತಿಯವರಿಗೆ ನೀವೆಲ್ಲರೂ ಯೋಜಿಸಿರುವ ಅಭಿನಂದನ ಸಮಾರಂಭ ಸೂಕ್ತವಾದುದು, ಅಭಿಮಾನಪಡುವಂಥದು.

**ಡಾ. ಎಸ್. ಎಂ. ವೃಷಬೇಂದ್ರಸ್ವಾಮಿ**
ಧಾರವಾಡ

ನೀವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹಾಗೂ ಕನ್ನಡ ಭಾಷೆ ಮತ್ತು ನಾಡಿನ ಕ್ಷೇಮಕ್ಕಾಗಿ ಕೆಚ್ಚಿನಿಂದ ಹೋರಾಡುತ್ತಿರುವ ಕನ್ನಡ ಶಕ್ತಿಯಾಗಿದ್ದೀರಿ. ಯಾವ ಸ್ಥಾನಮಾನಗಳನ್ನು ಅಪೇಕ್ಷಿಸದೆ ನಾಡು ನುಡಿಯ ಸೇವೆಗೆ ನೀವು ಜೀವನವನ್ನು ಸಮರ್ಪಿಸಿಕೊಂಡಿರುವುದು ಆದರ್ಶವಾದುದು. ಈ ಸಂದರ್ಭದಲ್ಲಿ ನಿಮಗೆ ನನ್ನ ಹಾರ್ದಿಕ ಅಭಿನಂದನೆಗಳು.

**ಪಿ. ಆರ್. ತಿಪ್ಪೇಸ್ವಾಮಿ**
ಕಲಾವಿದರು, ಧರ್ಮಸ್ಥಳ

ಕನ್ನಡದ ವಿವಿಧ ಕ್ಷೇತ್ರಗಳ, ಅದರಲ್ಲಿಯೂ ಶಾಸನಗಳ ಅಧ್ಯಯನದಿಂದ ನಾಡಿನ ಸಂಸ್ಕೃತಿಯ ಪರಿಚಯ ನಮಗೆಲ್ಲ ಮಾಡಿಕೊಟ್ಟ ನಿಮ್ಮ ಜೀವನ ಸಾರ್ಥಕ. ಈ ಸಂದರ್ಭದಲ್ಲಿ ನಿಮಗೆ ಸಲ್ಲುತ್ತಿರುವ ಅಭಿನಂದನೆ ಆದರ್ಶಮಯ. ನಿಮಗೆ ನನ್ನ ಹೃದಯ ತುಂಬಿದ ಶುಭಾಶಯಗಳು.

**ಗೌ. ಮ. ಉಮಾಪತಿಶಾಸ್ತ್ರಿ**
ಧರ್ಮಸ್ಥಳ

ಈ ವಾಮನಮೂರ್ತಿಯನ್ನು ಮೂವತ್ತು ವರ್ಷಗಳಿಂದಲೂ ನಾನುಬಲ್ಲೆ. ಅವರ ಸ್ನೇಹ ನನ್ನ ದೊಂದು ಭಾಗ್ಯ. ಅವರ ತ್ರಿವಿಕ್ರಮ ಸ್ವರೂಪವನ್ನೂ ಈಗ ಕಾಣುತ್ತಿದ್ದೇನೆ. ಕನ್ನಡ ಸಂಶೋಧನೆಯ ಮೇರುವನ್ನೇರಿದ್ದಾರೆ. ಪ್ರಾಧ್ಯಾಪಕರಾಗಿ ಶಿಷ್ಯರ ಹೃದಯಗಳನ್ನು ಗೆದ್ದುಕೊಂಡಿದ್ದಾರೆ. ಕನ್ನಡ ಶಕ್ತಿ ಕೇಂದ್ರಕ್ಕೆ ಪ್ರಾಣ ಪ್ರತಿಷ್ಠೆ ಮಾಡಿದ್ದಾರೆ. ಈ ತೇಜೋರೂಪ ಕನ್ನಡಿಗರೆಲ್ಲರ ನೆನಪಿನಲ್ಲುಳಿಯುತ್ತದೆ. ಈ ಸಂದರ್ಭದಲ್ಲಿ ಎಲ್ಲ ಸ್ನೇಹಿತರೊಡನೆ ನನ್ನ ಅಭಿನಂದನೆಗಳನ್ನು ಜೋಡಿಸುತ್ತೇನೆ.

**ಕೆ. ಎಸ್. ನಾರಾಯಣಸ್ವಾಮಿ**
ಗಾಂಧಿ ಶಾಂತಿ ಪ್ರತಿಷ್ಠಾನ, ಬೆಂಗಳೂರು

ಕನ್ನಡ ಚೈತನ್ಯದ ಚಿಲುಮೆಯಂತಿರುವ ಡಾ. ಚಿದಾನಂದಮೂರ್ತಿಯವರ ಸನ್ಮಾನ ಅದ್ದೂರಿಯಾಗಿ ನಡೆಯಲೆಂದು ಹಾರೈಸುತ್ತೇನೆ.

**ಬಿ. ಎ. ಸನದಿ**
ಮುಂಬಯಿ

ಇಂದಿನ ಕನ್ನಡದ ಉತ್ಕೃಷ್ಟ ಸಂಶೋಧಕರಲ್ಲಿ ಡಾ. ಎಂ. ಚಿದಾನಂದಮೂರ್ತಿಗಳು ಒಬ್ಬರು. 'ಕನ್ನಡ' ಅವರ ಉಸಿರು–ಪ್ರಾಣ. ಅವರು ತಮ್ಮ ಪ್ರಾಣವನ್ನು ಬಲಿಕೊಡಬಹುದು. ಆದರೆ ಕನ್ನಡದ ಕೀರ್ತಿಧ್ವಜವನ್ನು ಶತ್ರುಗಳ ಕೈಯಲ್ಲಿ ಕೊಡದ ಧೀರರು, ಧೀಮಂತರು, ಸ್ವಾಭಿಮಾನಿಗಳು. ಜೊತೆಗೆ ಕನ್ನಡದ ಗೌರವಕ್ಕೆ ಹೋರಾಡುವ ಅನ್ಯ ಭಾಷಿಕರ ಬಗೆಗೆ ಅಷ್ಟೇ ಗೌರವ ತೋರಬಲ್ಲವರು. ಕನ್ನಡದ–ಕರ್ನಾಟಕದ–ಕನ್ನಡ ಜನರ ಹಿತಕ್ಕಾಗಿ ಕೂತಲ್ಲಿ, ನಿಂತಲ್ಲಿ, ಮನಸ್ಸಿನಲ್ಲಿ, ಕನಸಿನಲ್ಲಿ ಸದಾ ಚಿಂತಿಸುವ ಅಲ್ಲಲ್ಲ ಹೋರಾಡುವ ವಿಶಿಷ್ಟ ವ್ಯಕ್ತಿ ಡಾ. ಎಂ. ಚಿದಾನಂದಮೂರ್ತಿಗಳು.

**ಡಾ|| ಶಿ. ರಾ ಗುಂಜಾಳ**
ಗುಲ್ಬರ್ಗಾ

ಕರ್ನಾಟಕದ ಶ್ರೇಷ್ಠ ಸಂಶೋಧಕ, ವಿದ್ವಾಂಸ ಹಾಗೂ ನನ್ನ ವಿದ್ಯಾ ಗುರುಗಳಾದ ಡಾ. ಎಂ. ಚಿದಾನಂದಮೂರ್ತಿಯವರನ್ನು ಅಭಿನಂದಿಸುತ್ತಿದ್ದೀರಿ. ಇದಕ್ಕಾಗಿ ನಿಮಗೆ ಅಭಿನಂದನೆಗಳು. ಕನ್ನಡ ಭಾಷೆ, ಸಂಸ್ಕೃತಿ ಮತ್ತು ಸಮಾಜಗಳಿಗಾಗಿ ಅತ್ಯಂತ ಶ್ರದ್ಧೆಯಿಂದ ಸೇವೆ ಸಲ್ಲಿಸುತ್ತಿರುವವರು ಡಾ. ಎಂ. ಚಿದಾನಂದಮೂರ್ತಿಯವರು. ಅವರ ಈ ಕಾಯಕವು ಅರ್ಥಪೂರ್ಣವಾಗಿ ವಿಕಾಸಗೊಳ್ಳುತ್ತಿದೆ. ಹಿಂದೆಂದಿಗಿಂತಲೂ ಹೆಚ್ಚಾಗಿ ಇಂದು ಕರ್ನಾಟಕಕ್ಕೆ ಈ ಬಗೆಯ ನಿಷ್ಠಾವಂತ ಮಾರ್ಗದರ್ಶಕರ ಅವಶ್ಯಕತೆಯಿದೆ.

**ಡಾ|| ತಾಳ್ತಜೆ ವಸಂತಕುಮಾರ**
ಮುಂಬಯಿ

ಹೆಸರಿಗೆ ತಕ್ಕಂತೆ ಚಿತ್–ಆನಂದಮೂರ್ತಿಗಳಾದ ಚಿದಾನಂದಮೂರ್ತಿಯವರು ಸೂರ್ಕಾಲ ಬಾಳಿ ಕನ್ನಡ ನಾಡು ನುಡಿಗೆ ಸೇವೆ ಸಲ್ಲಿಸಲಿ.

**'ಸಿಸು' ಸಂಗಮೇಶ**
ವಿಜಾಪುರ

ನಿಮಗೆ ಅರವತ್ತು, ನಿಮ್ಮ ಚೈತನ್ಯ ನಿತ್ಯ ಯೌವನದ್ದು. ನಿಮ್ಮನ್ನು ಅಭಿನಂದಿಸುವುದರಿಂದ ನಾವು ನಮ್ಮನ್ನೇ ಅಭಿನಂದಿಸಿಕೊಂಡ ಹಾಗೆಯೇ. ಇಂದು ನಮ್ಮ ನಾಡು ಮತ್ತು ಭಾಷೆಯಲ್ಲಿ ನಿಮ್ಮ ಮಟ್ಟದ ರೀತಿಯ ಕ್ರಿಯಾಶೀಲ ವೈಚಾರಿಕರು ಬೇರೆ ಇಲ್ಲ. ನಿಮ್ಮ ಶಕ್ತಿ ಇನ್ನೂ ಹೆಚ್ಚಲಿ.

**ಸಿದ್ಧಲಿಂಗಪಟ್ಟಣಶೆಟ್ಟಿ**
ಧಾರವಾಡ

ಕನ್ನಡದ ನೆಲಕ್ಕೆ, ಜಲಕ್ಕೆ, ಭಾಷೆಗೆ, ಸಂಸ್ಕೃತಿಗೆ, ಯಾವ ದಿಕ್ಕಿನಿಂದಲೂ ಧಕ್ಕೆ ತಗಲುತ್ತದೆ ಎಂದಾಗಲೆಲ್ಲ ಸಿಡಿದೆದ್ದು ನಿಲ್ಲುವ ಕನ್ನಡಿಗರ ಜೀವ ಧ್ವನಿಯಾಗಿ ಶ್ರೀ ಚಿದಾನಂದಮೂರ್ತಿಯವರು ಮಾಡಿರುವ, ಮಾಡುತ್ತಿರುವ ಸ್ಮರಣೀಯ ಸೇವೆಗೆ–ನನ್ನ ಹೃದಯ ತುಂಬಿ ಬಂದಿದೆ.

**ಬಿ. ಪಿ. ಶಿವಾನಂದರಾವ್**
ಕುಮಟಾ

ಈ ಶತಮಾನದ ಕನ್ನಡದ ಮಹಾ ಸಂಶೋಧಕರ ಸಾಲಿನಲ್ಲಿರುವ ಚಿ. ಮೂ. ಅವರು ಕನ್ನಡದ ದೀಪವಾಗಿ ಬೆಳಗಲೆಂದೂ ಅವರಿಗೆ ಸಕಲ ಆರೋಗ್ಯಭಾಗ್ಯಗಳೆರಡೂ ಪ್ರಾಪ್ತವಾಗಲೆಂದೂ ಹಾರೈಸುವೆ.

**ಡಾ॥ ಜಿ. ಎಂ. ಹೆಗಡೆ**
ಧಾರವಾಡ

ಡಾ॥ ಎಂ. ಚಿದಾನಂದಮೂರ್ತಿಯವರು ಕನ್ನಡ ನಾಡಿನಲ್ಲಿ ಮಾತ್ರವಲ್ಲದೆ ಇಡೀ ರಾಷ್ಟ್ರದ್ಯಂತ ಉತ್ತಮ ಪ್ರತಿಭಾನ್ವಿತ ಸಂಶೋಧಕರಾಗಿ ಕನ್ನಡ ನಾಡು, ನುಡಿ ಮತ್ತು ಸಂಸ್ಕೃತಿಯ ಹೆಗ್ಗಳಿಕೆಯನ್ನು ಎತ್ತಿ ಹಿಡಿಯುವ ಸಾಹಸಿಕ ಕಾರ್ಯದಲ್ಲೂ ಮುಂಚೂಣಿಯಲ್ಲಿನ ಅಗ್ರಗಣ್ಯರಾಗಿದ್ದಾರೆ. ಅವರ ಪ್ರತಿಭಾನ್ವಿತ ಕರ್ತೃತ್ವ ಶಕ್ತಿಯನ್ನು ಗುರುತಿಸಿ ಅಭಿನಂದಿಸುತ್ತಿರುವುದು ಕನ್ನಡ ನಾಡಿಗೇ ಸಂದ ಗೌರವವಾಗಿದೆ.

**ಕ. ಮ. ಶಿ. ಚಂದ್ರಶೇಖರಯ್ಯ**
ಶಿವಮೊಗ್ಗ

'ಕ್ರಿಯಾಚೇತನ' ತುಂಬ ಸೂಕ್ತ ಹೆಸರು. ಅವರಷ್ಟು ಚೈತನ್ಯ, ಚಟುವಟಿಕೆಯ, ಕೈತುಂಬ, ತಲೆ ತುಂಬ ಕೆಲಸ, ಕನಸುಗಳನ್ನು ಹೊತ್ತು ಸಾಕಾರಗೊಳಿಸಲು ಸದಾ ತೊಡಗಿರುವ ವ್ಯಕ್ತಿ ಈ ನಮ್ಮ ಸಾಹಿತ್ಯಲೋಕದಲ್ಲಿ ಮತ್ತಾರು ಇದ್ದಾರೆ ! ಅವರ ಅಭಿನಂದನ ಸನ್ಮಾನ ಯಶಸ್ವಿಯಾಗಲಿ.

**ಡಾ॥ ಶೈಲಜಾ ಉಡಚಣ**
ಗುಲ್ಬರ್ಗಾ

ಅದ್ವಿತೀಯ ಆಚಾರ್ಯರಾದ ತೀ.ನಂ.ಶ್ರೀ. ಅವರ ಅಚ್ಚುಮೆಚ್ಚಿನ ಶಿಷ್ಯರಾಗಿ ಡಾ॥ ಚಿದಾನಂದ ಮೂರ್ತಿಗಳು ಆಳವಾದ ಜೊತೆಗೆ ವಿಸ್ತಾರವೂ ಆದ ಪಾಂಡಿತ್ಯವನ್ನು ಪಡೆದು ಸಂಶೋಧನೆ, ಅಧ್ಯಯನ ಅಧ್ಯಾಪನಗಳಿಂದ ಕನ್ನಡ ನುಡಿಯ ಸೇವೆ ಮಾಡುತ್ತಿರುವುದಷ್ಟೆ ಅಲ್ಲದೆ ಕನ್ನಡ ಶಕ್ತಿ ಕೇಂದ್ರವನ್ನು ಸಂಘಟಿಸಿ ಕನ್ನಡಿಗರಲ್ಲಿ ಆತ್ಮಾಭಿಮಾನವನ್ನು ಜಾಗರಗೊಳಿಸುತ್ತಿದ್ದಾರೆ.

**ಸಿ. ವಿ. ಗಿರಿಧರ ಶಾಸ್ತ್ರಿ**
ಶೃಂಗೇರಿ

ಸಾಹಿತ್ಯಸೇವೆ, ಆಳವಾದ ಸಂಶೋಧನೆ, ಇತಿಹಾಸದ ಮೇಲೆ ಬೆಳಕು ಚೆಲ್ಲಿದ ತಮ್ಮ ಪಾಂಡಿತ್ಯ–ಕನ್ನಡ ನಾಡು ನುಡಿಗೆ ಸಂಸ್ಕೃತಿಗೆ ತಮ್ಮ ಅಮೂಲ್ಯ ಸೇವೆಯನ್ನು ಗುರುತಿಸಿ ತಮ್ಮನ್ನು ಅಭಿನಂದಿಸುವ ಸಮಾರಂಭಕ್ಕೆ ಶುಭ ಹಾರೈಸುತ್ತೇನೆ.

**ಎಂ. ಮುರುಗೇಂದ್ರಯ್ಯ**
ಸಂತೆ ಬೆನ್ನೂರು

ಕನ್ನಡ ನಾಡು–ನುಡಿಗೆ ವಿಶಿಷ್ಟವಾದ ಸೇವೆ ಸಲ್ಲಿಸಿದ ಡಾ॥ ಚಿದಾನಂದಮೂರ್ತಿಯವರನ್ನು ಅಭಿನಂದಿಸಲಿರುವ ಶುಭ ಸಂದರ್ಭದಲ್ಲಿ ಕಳುಹಿಸಿದ ಆಹ್ವಾನವು ತಲುಪಿದಾಗ ನಾವೆಲ್ಲರೂ ಅಪಾರ ವಾದ ಹರುಷ ಮತ್ತು ಹೆಮ್ಮೆಯನ್ನು ಏಕಕಾಲದಲ್ಲಿ ಅನುಭವಿಸಿದೆವು !

**ಎಂ. ಎಸ್. ನಾಗರಾಜ**
ಪ್ರಧಾನ ಕಾರ್ಯದರ್ಶಿ
ಕೆನರಾ ಬ್ಯಾಂಕ್ ಕನ್ನಡ ಸಂಘ
ಬೆಂಗಳೂರು

ಅರವತ್ತು ತುಂಬಿದ ಸಂದರ್ಭದಲ್ಲಿ ನಿಮ್ಮನ್ನು ಮನಸಾರೆ ಅಭಿನಂದಿಸುತ್ತಾ ಕನ್ನಡ ನಾಡು ನುಡಿಗೆ ಸಾಟಿ ಇಲ್ಲದ ಸೇವೆ ಸಲ್ಲಿಸಿರುವ ನಿಮಗೆ ಕನ್ನಡಾಂಬೆಯು ಸುದೀರ್ಘ ಆಯುರಾರೋಗ್ಯ ಹಾಗೂ ಸುಖ ಸಮೃದ್ಧಿಗಳನ್ನು ಕರುಣಿಸಲಿ ಎಂದು ಮನಸಾರೆ ಹಾರೈಸುತ್ತೇನೆ.

**ಬಿ. ವಿ. ವೀರಭದ್ರಪ್ಪ**

ಅಭಿನಂದನ ಸಮಾರಂಭ ಯಶಸ್ವಿಯಾಗಿ ನೆರವೇರಲಿ.

**ಮುದೇನೂರು ಸಂಗಣ್ಣ**
ಹರಪನಹಳ್ಳಿ

ಅಭಿನಂದನ ಸಮಾರಂಭ ಯಶಸ್ವಿಯಾಗಿ ನೆರವೇರಲಿ.

**ಡಾ॥ ಪಿ. ಎಸ್. ಶ್ರೀನಿವಾಸ**
ಮಧುರೈ

ಡಾ॥ ಎಂ. ಚಿದಾನಂದಮೂರ್ತಿಗಳು ಕನ್ನಡ ಸಾಹಿತ್ಯದಲ್ಲಿ, ಸಂಶೋಧನೆಯಲ್ಲಿ ದುಡಿದವರು. ಕನ್ನಡಕ್ಕಾಗಿ ಈಗಲೂ ಈ ಅರವತ್ತರ ವಯಸ್ಸಿನಲ್ಲಿ ಯುವಕರಂತೆ ಹೋರಾಡುವ ಅವರಿಗೆ ಅಭಿನಂದನ ಹಾಗೂ ಅವರ ಬಗ್ಗೆ ತರುವ ಪತ್ರಿಕೆಗಳು ನಿಜವಾಗಿ ಸಲ್ಲಬೇಕಾದದ್ದು.

**ಡಾ. ಶ್ರೀನಿವಾಸ ಉಡುಪ**
ಶಿವಮೊಗ್ಗ

ಡಾ॥ ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭ ಯಶಸ್ವಿಯಾಗಿ ನೆರವೇರಲಿ.

**ಬಿ. ಆರ್. ಹಿರೇಮಠ, ಮಹದೇಶ್ವರಯ್ಯ**
**ಅನ್ಸನ್, ಮುರಿಗೆಪ್ಪ, ಪನ್ನೀರ್ ಸೆಲ್ವಂ**
ಧಾರವಾಡ

ಡಾ॥ ಚಿದಾನಂದಮೂರ್ತಿಯವರಿಗೆ ಹೃತ್ಪೂರ್ವಕ ಅಭಿನಂದನೆಗಳು.

**ಶಿವರಾಜ್ ಕನಶೆಟ್ಟಿ**
ಬೀದರ್

ಡಾ॥ ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭ ಯಶಸ್ವಿಯಾಗಿ ನೆರವೇರಲಿ.

**ಡಾ॥ ಅಯ್ಯನಗೌಡರ್**
ಧಾರವಾಡ

ಶ್ರೀಯುತ ಚಿದಾನಂದಮೂರ್ತಿಗಳು ನಮ್ಮ ಕನ್ನಡ ನಾಡಿನ ಶ್ರೇಯೋಭಿವೃದ್ಧಿಗೆ ತುಂಬಾ ದುಡಿದಿದ್ದಾರೆ. ಅವರ ಅರವತ್ತು ವರ್ಷದ ಸಮಾರಂಭಕ್ಕೆ ನಮ್ಮೆಲ್ಲರ ಆತ್ಮೀಯ ಅಭಿನಂದನೆಗಳು.

**ಸಿ. ಎಂ. ಶ್ರೀಕಂಠಯ್ಯ**
ಎಲ್ಲೂರು

ಡಾ॥ ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭ ಯಶಸ್ವಿಯಾಗಿ ನೆರವೇರಲಿ.

**ಡಾ. ವಿ. ಶಿವಾನಂದ್**
ಬನಾರಸ್

ಆತ್ಮೀಯ ಗುರುಗಳಾದ ಚಿದಾನಂದಮೂರ್ತಿ ಅವರಿಗೆ ಶಿಷ್ಯನ ನಮನಗಳು. ಗುರುಗಳು ಶತಾಯುಷಿಗಳಾಗಲಿ. ಸಮಾರಂಭವು ಯಶಸ್ವಿಯಾಗಲಿ.

**ಮ. ಗಂ. ರೇಣುಕ ಪ್ರಸನ್ನ**
ಮೈಸೂರು

ಅಭಿನಂದನ ಸಮಾರಂಭ ಯಶಸ್ವಿಯಾಗಲಿ.

**ಐ. ಎಂ. ವಿಠ್ಠಲಮೂರ್ತಿ**
ಬಿಜಾಪುರ

ಡಾ|| ಎಂ. ಚಿದಾನಂದಮೂರ್ತಿಯವರನ್ನು ಅಭಿನಂದಿಸಲು ಸಮಾರಂಭವೊಂದನ್ನು ಏರ್ಪಡಿಸಿರುವ ನೀವುಗಳು ಪುಣ್ಯವಂತರು. ಈ ಸಮಾರಂಭವು ಯಶಸ್ವಿಯಾಗಲಿ, ಸಾರ್ಥಕವಾಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

**ಕೆ. ವೆಂಕಣ್ಣಾಚಾರ್**
ಚಿತ್ರದುರ್ಗ

ಡಾ|| ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭ ಯಶಸ್ವಿಯಾಗಿ ನೆರವೇರಲಿ.

**ಅಚ್ಯುತ ದೇವರಾಯ**
ಹೊಸಪೇಟೆ

ಡಾ|| ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭ ಯಶಸ್ವಿಯಾಗಲಿ.

**ಮುಳಲಿ ವಸಂತಕುಮಾರ್**
ಮೈಸೂರು

ಚಿದಾನಂದಮೂರ್ತಿ ಅವರು ಮತ್ತು ಅವರಂತಹ ಕನ್ನಡದ ಬೆರಳೆಣಿಕೆಯ ಮಂದಿಯಿಂದ ನಾಲ್ಕು ಕೋಟಿ ಕನ್ನಡಿಗರಲ್ಲಿ ಸ್ವಾಭಿಮಾನ ಮತ್ತು ನಾಡುನುಡಿಯ ಪ್ರೀತಿ ಜಾಗೃತಗೊಳ್ಳಬೇಕಾಗಿದೆ. ನನ್ನ ಗುರುಗಳ ಈ ಸನ್ಮಾನ ಸಮಾರಂಭ ಅತ್ಯಂತ ಯಶಸ್ವಿ ಆಗಲು ಮನಃಪೂರ್ವಕ ಪ್ರಕೃತಿಯಲ್ಲಿ ಬೇಡುವೆ.

**ಗುಡಿಬಂಡೆ ಪೂರ್ಣಿಮಾ**

ಡಾ. ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭ ಯಶಸ್ವಿಯಾಗಲಿ.

**ಡಾ|| ಸಂಗಮೇಶ ಸೌದತ್ತಿಮಠ**
ಗುಲ್ಬರ್ಗಾ

ಅಭಿನಂದನ ಸಮಾರಂಭದ ಸಂದರ್ಭದಲ್ಲಿ ಶುಭಾಶಯಗಳು.

**ಅಂತರಗಂಗೆ ಶಂಕರಪ್ಪ**

ಡಾ. ಎಂ. ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭಕ್ಕೆ ಹೃತ್ಪೂರ್ವಕ ಶುಭಾಶಯಗಳು.

**ಸಿದ್ಧಯ್ಯ**
ಚಿತ್ರದುರ್ಗ

ಡಾ. ಎಂ. ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭ ಯಶಸ್ವಿಯಾಗಲಿ.

**ಬಿ. ಎಚ್. ರಾಜಶೇಖರ ಹೆಬ್ಬಾರ**
ಸಿರಸಿ

ಹಿರಿಯ ವಿದ್ವಾಂಸ, ಸಂಶೋಧಕ, ವಿಮರ್ಶಕ, ಎಲ್ಲಕ್ಕೂ ಮಿಗಿಲಾಗಿ ಕನ್ನಡದ ಕಟ್ಟಾಳು ಕನ್ನಡ ಶಕ್ತಿ ಕೇಂದ್ರದ ರೂವಾರಿ ಆಗಿರುವ ಡಾ. ಎಂ. ಚಿದಾನಂದಮೂರ್ತಿ ಅವರಿಗೆ ಅರ್ಥಪೂರ್ಣವಾದ ಅಭಿನಂದನ ಸಮಾರಂಭ ಹಮ್ಮಿಕೊಂಡಿರುವ ಎಲ್ಲರಿಗೂ ಅಭಿನಂದನೆಗಳು.

**ಸದಾನಂದ ಕನವಳ್ಳಿ**
ಧಾರವಾಡ

ಸುಪ್ರಸಿದ್ಧ ಶಾಸನ ಪರಿಶೋಧಕುಲು, ಕನ್ನಡ ಭಾಷಾ ಸೇವಾ ತತ್ಪರಲು ಅಯಿನ ಆಚಾರ್ಯ ಡಾ॥ ಎಂ. ಚಿದಾನಂದಮೂರ್ತಿಗಾರು ಆಂಧ್ರ ದೇಶಂಲೋನಿ ಯುವ ಪರಿಶೋಧಕುಲಕು ಮಾರ್ಗದರ್ಶಕುಲು, ಗುರುತುಲ್ಯುಲು. ದ್ರಾವಿಡ ಭಾಷಾ ಸಂಸ್ಥ ಅಧ್ಯಕ್ಷುಡುಗಾವಾರು ದಕ್ಷಿಣ ಭಾರತೀಯ ಸಾಹಿತ್ಯ ವಿಶಾಲಕು ವಿಶಿಷ್ಟಮೈನ ಕೃಷಿ ಚೇಶಾರು. ವಾರಿ ಪರಿಶೋಧನಲು ಪ್ರಾಮಾಣಿಕಂಗಾ ಗುರ್ತಿಂಪ ಬಡ್ಡಾಯಿ. ಆಚಾರ್ಯ ಚಿದಾನಂದಮೂರ್ತಿಗಾರಿ ಷಷ್ಠಿಪೂರ್ತಿ ಸಂದರ್ಭಂಗಾ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ ಆಂಧ್ರ ಭಾರತಿ ಅಧ್ಯಾಪಕ, ಪರಿಶೋಧಕ ವಿದ್ಯಾರ್ಥುಲ ಪರಾನವಾರಿಕಿ ಮಾ ಹೃದಯ ಪೂರ್ವಕ ಶುಭಾಕಾಂಕ್ಷಲು.

**ಪಿ. ಎಲ್. ಶ್ರೀನಿವಾಸ ರೆಡ್ಡಿ**
ಅಧ್ಯಕ್ಷ, ಆಂಧ್ರಭಾರತಿ
ಅನಂತಪುರ

As an eminent researcher and dedicated social worker Prof. M. Chidananda Moorthy always stood as a model for young researchers in the field of Dravidan studies. I was very much benifited by his pioneering work on Lamani tribe in Kannada. We wish God to bless him with life of continued activity and cherishable success.

**Dr. H. S. Eramhananda**
Anantapur

# ಪರಿವಿಡಿ

ಪತ್ನಿ ವಿಶಾಲಾಕ್ಷಿಯ ಜೊತೆ

ಸ್ವಗೃಹದ ಮುಂದೆ : ಪತ್ನಿ ವಿಶಾಲಾಕ್ಷಿ, ಮಗಳು ಶೋಭ, ಅಳಿಯ ಯತೀಶ್, ಮಗ ವಿನಯಕುಮಾರ್ ಜೊತೆ



ಕೆ. ಕೊಟ್ಟೂರಯ್ಯ (ಅಯ್ಯ)



ಪಾರ್ವತಮ್ಮ (ಅವ್ವ)

ಡಾ॥ ಎಂ. ಚಿದಾನಂದಮೂರ್ತಿಗಳ ತಂದೆತಾಯಿಯರು



ಚಿದಾನಂದಮೂರ್ತಿ: ಪ್ರೌಢಶಾಲೆಯ ಮೊದಲನೆಯ ತರಗತಿಯ ವಿದ್ಯಾರ್ಥಿಯಾಗಿ (೧೯೪೬)



ಎಂ.ಎ. ಪದವೀಧರ (೧೯೫೮)



ಮೈಸೂರು ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ.
ಪದವಿ ಮತ್ತು ಬಿ.ಎ. ಪದವಿ
ಒಟ್ಟಿಗೆ ಸ್ವೀಕರಿಸಿದಾಗ (೧೯೬೪)



ಪತ್ನಿ ವಿಶಾಲಾಕ್ಷಿ, ಮಗಳು ಶೋಭ,
ಮಗ ವಿನಯನೊಂದಿಗೆ



ಪತ್ನಿಯೊಂದಿಗೆ ಪ್ರವಾಸದ ಸಂದರ್ಭದಲ್ಲಿ

ದೇ.ಜ.ಗೌ., ಡಿ.ಎಲ್.ಎನ್., ತೀ.ನಂ.ಶ್ರೀ., ರಂ.ಶ್ರೀ.ಮುಗಳಿ, ಕೆ. ವೆಂಕಟರಾಮಪ್ಪ,
ಎಸ್.ವಿ. ಪರಮೇಶ್ವರ ಭಟ್ಟ ಜಿ.ಎಸ್. ಶಿವರುದ್ರಪ್ಪ, ಜಿ. ವರದರಾಜಾರಾವ್, ಉ.ಕ. ಸುಬ್ಬರಾಯಾಚಾರ್‌ರೊಡನೆ



ಮೈಸೂರು ಮಹಾರಾಜಾ ಕಾಲೇಜಿನ ಮುಂದೆ–ಗುರುಗಳಾದ ಡಿ. ಎಲ್. ನರಸಿಂಹಾಚಾರ್ಯರ ಜೊತೆ (೧೯೫೨)



ಹಂಪೆಯಲ್ಲಿ ಹರಿಹರನ ಸಂಶೋಧನೆಗೆ ಹೋದಾಗ ಸನ್ಯಾಸಿಗಳೊಬ್ಬರ
ಪವಾಡದ ವಸ್ತುಸ್ಥಿತಿಯ ದರ್ಶನ–ಜತೆಯಲ್ಲಿ ಜೆ.ಎಂ.ಹೆಗಡೆ
ಸದಾಶಿವಯೋಗಿಗಳು, ಕೆ. ವಿ. ತಿರುಪಾಲಯ್ಯ



.'ಪಂಪಾಪುರ'ದ (ಹಂಪೆಯ) ಪಶ್ಚಿಮ ಹೆಬ್ಬಾಗಿಲು
ಬೆಟ್ಟದ ಮೇಲೆ ಸೋಮೇಶ್ವರ ದೇವಾಲಯ ಗುಹೆ
(ಮುಂಭಾಗದ ಬಂಡೆಯ ಶಾಸನದ ಪರಿಶೀಲನೆ)



ವೀರಗಲ್ಲೊಂದರ ಪರಿಶೀಲನೆ



ಪೂರ್ಣಸೂರ್ಯಗ್ರಹಣ ವೀಕ್ಷಣೆ

ವಿಚಾರಸಂಕಿರಣವೊಂದರಲ್ಲಿ ಅಧ್ಯಕ್ಷ ಭಾಷಣ. ವೇದಿಕೆಯಲ್ಲಿ ಶಿವಾನಂದ ಗಾಳಿ,
ಚಂದ್ರಶೇಖರ ಪಾಟೀಲ, ಶ್ರೀಕಂಠ ಕೂಡಿಗೆ, ಜಿ.ಎಂ. ಹೆಗಡೆ

ಬಿ. ಎಂ. ಶ್ರೀ ಪ್ರತಿಷ್ಠಾನದಲ್ಲಿ ಪುಸ್ತಕ ಬಿಡುಗಡೆ. ವೇದಿಕೆಯಲ್ಲಿ: ಮಾಸ್ತಿ ವೆಂಕಟೇಶ ಅಯ್ಯಂಗಾರ್,
ನಿಟ್ಟೂರು ಶ್ರೀನಿವಾಸರಾವ್ ಮತ್ತು ಎಂ.ಪಿ.ಎಲ್. ಶಾಸ್ತ್ರಿ



ನೆಲಮಂಗಲದಲ್ಲಿ ನಡೆದ ಗೊರೂರು ಸನ್ಮಾನ



ಪುರಭವನದಲ್ಲಿ ತಳುಕಿನ ವೆಂಕಣ್ಣಯ್ಯ ಜನ್ಮಶತಾಬ್ದಿ ಆಚರಣೆ
ಜತೆಯಲ್ಲಿ ಪ್ರೊ॥ ಎಂ.ವಿ. ಸೀತಾರಾಮಯ್ಯ
ಮತ್ತು ಚಿತ್ರನಟ ಉದಯಕುಮಾರ್

ಹಂಪೆಯಲ್ಲಿ ಭಾರತ ಸರ್ಕಾರದ ಪ್ರಾಚ್ಯ ಸರ್ವೇಕ್ಷಣಾಲಯದ ಆಶ್ರಯದಲ್ಲಿ
'ವಿಶ್ವ ಪರಂಪರಾ ದಿನ' ಉದ್ಘಾಟನಾ ಸಮಾರಂಭ

ವಿಚಾರ ಸಂಕಿರಣವೊಂದರಲ್ಲಿ ಎಸ್.ಎಸ್. ಹರ್ಲಾಪುರ, ಎಂ. ಎಂ. ಕಲಬುರ್ಗಿ, ಆರ್.ಸಿ. ಹಿರೇಮಠ, ಶಿವರುದ್ರಪ್ಪ ಹಾಗೂ ರಾವಸಾಹೇಬ ದೇಶಪಾಂಡೆ ಅವರೊಡನೆ



ಕರ್ನಾಟಕ ವಿಶ್ವವಿದ್ಯಾಲಯದ ಬಸವೇಶ್ವರಪೀಠದ ವಿಚಾರ ಸಂಕಿರಣ. ಎಂ.ಎಂ. ಕಲಬುರ್ಗಿ, ಶಾಂತರಸ, ಬಿ.ಜಿ.ಎಲ್.ಸ್ವಾಮಿ, ಕುಲಪತಿ ಎಸ್.ಎಸ್. ಒಡೆಯರ್ ಅವರೊಡನೆ



ಬೀದರ್ ಜಿಲ್ಲಾ ಕನ್ನಡ ಶಕ್ತಿಕೇಂದ್ರದ ಅಧ್ಯಕ್ಷ ಶಿವಶರಣಪ್ಪ ವಾಲಿಯವರಿಂದ ಸನ್ಮಾನ (೧೯೯೦)

ಶಂಬಾ. ಜೋಶಿ ಮತ್ತು ಶ್ರೀಮತಿ ಜೋಶಿ ಅವರೊಂದಿಗೆ 'ಅಧ್ಯಯನ' ಅಭಿನಂದನ ಗ್ರಂಥ ಸಂಪಾದಕ ಸಮಿತಿ
ಮ.ಗ. ಶೆಟ್ಟಿ ರಾ. ನಂ. ಚಂದ್ರಶೇಖರ; ಆರ್. ಶೇಷಶಾಸ್ತ್ರಿ, ಶಿವಲಿಂಗಯ್ಯ

ಶಂಬಾ. ಜೋಶಿ ಅಭಿನಂದನ ಗ್ರಂಥ 'ಅಧ್ಯಯನ' ಬಿಡುಗಡೆ ಸಮಾರಂಭ
ನೆನಪಿನ ಕಾಣಿಕೆ ನೀಡುತ್ತಿರುವುದು ಪಕ್ಕದಲ್ಲಿ ಹಾ. ಮಾ. ನಾಯಕ



ಜಿ. ಎಸ್. ಶಿವರುದ್ರಪ್ಪನವರ ಜೊತೆ



ಮೋಪೆಡ್ ಸವಾರಿ



ಅಥೆನ್ಸ್ ಸಮೀಪದ ದ್ವೀಪವೊಂದರಲ್ಲಿ ಪ್ರಾಚೀನ
ಗ್ರೀಕ್ ಸಂಸ್ಕೃತಿಯ ಅವಶೇಷಗಳ ವೀಕ್ಷಣೆ (೧೯೬೮)



ಎಂ.ಎ. ವಿದ್ಯಾರ್ಥಿಗಳ ಪ್ರವಾಸ ಮಾರ್ಗದರ್ಶಿ



...ಕಿನಲ್ಲಿ 'ಸುವರ್ಣಬುದ್ಧ' ಪ್ರತಿಮೆಯ ಮುಂದೆ (೧೯೮೦)



ಅಮೆರಿಕೆಯ ಆಸ್ಟಿನ್ ನಗರದಲ್ಲಿ (೧೯೮೦)



ಅಮೆರಿಕೆಯ ಚಿಕಾಗೋ ನಗರದಲ್ಲಿ



ಉಪನ್ಯಾಸ ಸಂದರ್ಭ

ಸಾಹಿತಿಗಳ ಕಲಾವಿದರ ಬಳಗದ ಮುಖವಾಣಿ 'ಕನ್ನಡಕಲಿ' ವಾರ್ತಾಪತ್ರದ ಬಿಡುಗಡೆ ಸಮಾರಂಭ (೩೧.೧.೧೯೮೭).
ವೇದಿಕೆಯಲ್ಲಿ : ರಾ. ನಂ. ಚಂದ್ರಶೇಖರ, ಪಿ. ವಿ. ನಾರಾಯಣ, ಜಿ. ಕೆ. ಸತ್ಯ, ವಿ.ಕೃ. ಗೋಕಾಕ್, ಆರ್. ಎಂ. ಹಡಪದ್

ರವೀಂದ್ರ ಕಲಾಕ್ಷೇತ್ರ ಮುಂದೆ ಡಾ॥ ಮಹಿಷಿ ವರದಿ ಅನುಷ್ಠಾನದ ಬಗ್ಗೆ ಮುಖ್ಯಮಂತ್ರಿ ಬೊಮ್ಮಾಯಿ ಅವರನ್ನು
ಒತ್ತಾಯಿಸುತ್ತಿರುವುದು. ಪಕ್ಕದಲ್ಲಿ ಜಿ. ಕೆ. ಸತ್ಯ



ವಿಧಾನಸೌಧದ ಮುಂದೆ ಧರಣಿ : ಸಿದ್ಧಯ್ಯ ಪುರಾಣಿಕ,
ಜಿ. ಎಸ್. ಶಿವರುದ್ರಪ್ಪ, ಅಶೋಕ್ ಮೊದಲಾದವರೊಡನೆ




ಎಸ್. ಎಲ್. ಭೈರಪ್ಪ ಅವರಿಂದ
'ಕನ್ನಡ–ಕನ್ನಡಿಗ–ಕರ್ನಾಟಕ' ಪುಸ್ತಕ ಬಿಡುಗಡೆ.
ಚೆನ್ನವೀರಕಣವಿ, ಡಿ. ಬಿ. ಚಂದ್ರೇಗೌಡ ಮತ್ತು
ಜಿ. ಎಸ್. ಸಿದ್ಧಲಿಂಗಯ್ಯನವರೊಂದಿಗೆ







ಸರ್ಪಭೂಷಣ ಮಠದಲ್ಲಿ 'ಬುಧವಾರದ ಸಭೆ 'ಯೊಂದರಲ್ಲಿ ಕಾರ್ಯಕರ್ತರೊಡನೆ




ಡಾ. ಎಂ. ಎಂ. ಕಲಬುರ್ಗಿ, ಶ್ರೀಮತಿ ವಿಶಾಲಾಕ್ಷಿ, ಡಾ. ಎಂ. ಚಿದಾನಂದಮೂರ್ತಿ,
ಸಿದ್ಧಗಂಗಾ ಶ್ರೀಗಳು, ಡಾ. ಪಿ. ಎಸ್. ರಾಮಾನುಜಂ, ಕೆ. ಶಿವರಾಮು




ಸನ್ಮಾನಿತರ ನುಡಿ



ಸಿದ್ಧಗಂಗಾ ಶ್ರೀಗಳಿಂದ ಅಭಿನಂದನೆ



ಹರ್ಷಮೂರ್ತಿ : ಚಿದಾನಂದಮೂರ್ತಿ




ಪುಷ್ಪ–ಆಶೀರ್ವಚನಗಳ ಸುರಿಮಳೆ

# ಖ್ಯಾತ ಸಂಶೋಧಕ - ಕನ್ನಡ ಪರ ಹೋರಾಟಗಾರ ಡಾ. ಎಂ. ಚಿದಾನಂದಮೂರ್ತಿ

**ಡಾ॥ ಎಸ್. ವಿದ್ಯಾಶಂಕರ**

ಡಾ॥ ಚಿದಾನಂದಮೂರ್ತಿಯವರು ನನ್ನ ಪೂಜ್ಯ ಗುರುಗಳು. 1961 ರಿಂದ ಇಂದಿನವರೆವಿಗೂ ಆ ಗುರು-ಶಿಷ್ಯ ಸಂಬಂಧ ಮಧುರವಾಗಿ ಉಳಿದುಕೊಂಡು ಬಂದಿದೆ. ಮೂವತ್ತು ವರ್ಷಗಳ ಹಿಂದೆ ಅವರು ತೋರಿದ ಶಿಷ್ಯ ವಾತ್ಸಲ್ಯ ಇಂದಿಗೂ ಅವಿರತಧಾರೆಯಾಗಿ ಹರಿದುಬಂದಿದೆ. ಪಾಂಡಿತ್ಯ, ಪ್ರತಿಭೆ, ಸಜ್ಜನಿಕೆ ಅಂದು ನಾನು ನನ್ನ ಮೇಷ್ಟರಲ್ಲಿ ಕಂಡ ವಿಶಿಷ್ಟ ಗುಣ. ಇಂದಿಗೂ ಅವರು ನನ್ನ ಪ್ರೀತಿಯ ಮೇಷ್ಟು. ಅವರು ನಿರಂತರ ಅಧ್ಯಯನ ಶೀಲರು. ಹೀಗಾಗಿ ಅವರು ವಿದ್ಯಾರ್ಥಿಗಳ ಪಾಲಿಗೆ ಅಚ್ಚುಮೆಚ್ಚಿನ ಗುರುಗಳು. 1961-62 ರಲ್ಲಿ ನಾನು ಅವರ ವಿದ್ಯಾರ್ಥಿಯಾಗಿದ್ದೆ. ನಾನು ವಾಸವಿದ್ದ ಬೆಟ್ಟದಪುರದ ಹಾಸ್ಟೆಲ್‌ನ ಯೂನಿಯನ್ ಅಧ್ಯಕ್ಷರಾಗಿ ಡಾ॥ ಮೂರ್ತಿಯವರು ಬಂದದ್ದರಿಂದ ನನ್ನ ಅವರ ಸಂಬಂಧ ಇನ್ನಷ್ಟು ನಿಕಟವಾಯಿತು. ಹಾಸ್ಟೆಲ್‌ನಲ್ಲಿ ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸಲು ನಮ್ಮನ್ನೆಲ್ಲಾ ಪ್ರೇರೇಪಿಸುತ್ತಿದ್ದರು. ಸಂಗಮ ಎನ್ನುವ ವಾರ್ಷಿಕ ಪುರವಣಿಯನ್ನು ಹೊರತರಲು ಅವರು ಕಾರಣರಾದರು. ನನ್ನನ್ನು ಹಾಗೂ ನನ್ನ ಮಿತ್ರರನ್ನು ಬರೆಯಲು ಪ್ರೋತ್ಸಾಹಿಸಿದ್ದು ಅವರೇ. ಗೋವಿಂದಪೈಗಳ ನಾಟಕಗಳ ಬಗ್ಗೆ ನಾನು ಬರೆದ ಲೇಖನ ಬಹುಶಃ ನನ್ನ ಮೊದಲ ಲೇಖನ.

ಡಾ॥ ಮೂರ್ತಿಯವರಿಗೆ ಸಮಾಜ ಸೇವೆಯಲ್ಲಿ ವಿಶೇಷವಾದ ಆಸಕ್ತಿ. ಅಂಗವಿಕಲ ಮಕ್ಕಳ ಬಗೆಗೆ ಅವರಿಗೆ ವಿಶೇಷ ಮಾನವೀಯ ಅನುಕಂಪ, ಕರುಣೆ. ಮೈಸೂರಿನಲ್ಲಿದ್ದಾಗ ಅವರು ಕುರುಡರ ಪಾಠಶಾಲೆಗೆ ಹೋಗುತ್ತಿದ್ದರು. ಅಲ್ಲಿನ ಮಕ್ಕಳಿಗೆ ಕಥೆ ಹೇಳುವುದರ ಮೂಲಕ ಅವರಿಗೆ ಮನರಂಜನೆ ನೀಡುತ್ತಿದ್ದರು ಮಕ್ಕಳ ತಂದೆ-ತಾಯಿಗಳಿಗೆ ಪತ್ರ ಬರೆಯುತ್ತಿದ್ದರು. ನಾನು ಡಾ॥ ಮೂರ್ತಿಯವರ ಜೊತೆ ಒಂದೆರಡು ಬಾರಿ ಆ ಶಾಲೆಗೆ ಹೋಗಿದ್ದೆ. ಡಾ॥ ಮೂರ್ತಿಯವರ ಆಗಮನಕ್ಕಾಗಿ ಆ ಮಕ್ಕಳು ಎಷ್ಟು ಕಾತರದಿಂದ ಕಾಯುತ್ತಿದ್ದರೆಂಬುದನ್ನು ಕಂಡಾಗ ಡಾ॥ ಮೂರ್ತಿಯವರ ಈ ಸಾಮಾಜಿಕ ಚಟುವಟಿಕೆಯ ಬಗೆಗೆ ಹೆಮ್ಮೆಯೆನಿಸಿತು. ಅವರಿಂದ ಹಾಡು ಹೇಳಿಸಿ ಕಥೆ ಹೇಳಿಸಿ, ತಾವು ಹಾಸ್ಯ ಘಟನೆಗಳನ್ನು ಹೇಳಿ ಅವರನ್ನು ನಗಿಸಿ ಬರುತ್ತಿದ್ದ ಡಾ॥ ಮೂರ್ತಿಯವರನ್ನು ಕಂಡಾಗ ಅವರ ಬಗೆಗಿನ ಗೌರವ ಇಮ್ಮಡಿಸಿತು. ಚೀನಾ ಭಾರತದ ಮೇಲೆ ಧಾಳಿ ನಡೆಸಿದಾಗ ನಮ್ಮನ್ನೆಲ್ಲಾ ಕರೆದುಕೊಂಡು ಹೋಗಿ ಸೈನಿಕರಿಗಾಗಿ ಸಾವಿರಾರು ರೂಪಾಯಿ ಹಣ ಸಂಗ್ರಹಿಸಿದರು. ಸೈನಿಕರಿಗೆ ಕಂಬಳಿಗಳನ್ನು ಕಳುಹಿಸಿ ಕೊಡಲು ತಮ್ಮ ಅಮೂಲ್ಯ ಗ್ರಂಥಗಳನ್ನು ಸ್ವತಃ ತಾವೇ ನಿಂತು ಮಾರಿದ್ದು ನನಗೆ ಮರೆಯಲಾಗದ ಘಟನೆ.

**ವಿದ್ಯಾರ್ಥಿ ಜೀವನ :**

ಡಾ॥ ಮೂರ್ತಿಯವರು ಹುಟ್ಟು ಪ್ರತಿಭಾವಂತರು. ಅವರು ವಿದ್ಯಾರ್ಥಿ ಜೀವನದಲ್ಲಿ ಸದಾ ಮುಂದಿರುತ್ತಿದ್ದರು. 1948ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಪ್ರಥಮದರ್ಜೆಯಲ್ಲಿ ಪಾಸು ಮಾಡಿದ್ದರು. ಗ್ರಾಮೀಣ ಪರಿಸರದಿಂದ ಬಂದ ಬಾಲಕ ಪ್ರಥಮದರ್ಜೆಯಲ್ಲಿ ಪಾಸಾಗುವುದು ಆ ಕಾಲಕ್ಕೆ ಹೆಮ್ಮೆಯ ಸಂಗತಿಯಾಗಿತ್ತು. 1950 ರಲ್ಲಿ ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಪ್ರಥಮ ದರ್ಜೆ (ಹತ್ತನೇ ರ್‍ಯಾಂಕ್)

ಪಡೆದಾಗ ಎಲ್ಲರ ಗಮನ ಈ ಪ್ರತಿಭಾವಂತನ ಕಡೆಗಿದ್ದಿತು. ಪ್ರತಿಭಾವಂತ ವಿದ್ಯಾರ್ಥಿ ಇಂಜಿನಿಯರಿಂಗ್ ಇಲ್ಲವೆ ವೈದ್ಯಕೀಯ ಪದವಿಯ ಕಡೆಗೆ ಒಲಿಯುವುದು ವಾಡಿಕೆ. ಬಂಧು-ಬಾಂಧವರೆಲ್ಲರೂ ಇಂಜಿನಿಯರಿಂಗ್‌ಗೆ ಸೇರಲು ಒತ್ತಾಯಿಸಿದರು. ಅರ್ಜಿ ಹಾಕಿದ್ದರೆ, ಇಂಜಿನಿಯರಿಂಗ್ ಇಲ್ಲವೆ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ಸುಲಭವಾಗಿ ದೊರೆಯುತ್ತಿತ್ತು. ಆದರೆ ಚಿದಾನಂದಮೂರ್ತಿಯವರು ಇಷ್ಟಪಟ್ಟದ್ದು ಕನ್ನಡ. ಮನೆಯವರೆಲ್ಲರ ವಿರೋಧದ ನಡುವೆ 1953ರಲ್ಲಿ ಕನ್ನಡ ಆನರ್ಸ್‌ಗೆ ಸೇರಿದರು. ಇಲ್ಲೂ ಪ್ರಥಮ ದರ್ಜೆ ಪ್ರಥಮ ರ‍್ಯಾಂಕ್. ಇವರ ಪ್ರತಿಭೆಯನ್ನು ಮನ್ನಿಸಿದ ಮೈಸೂರು ವಿಶ್ವವಿದ್ಯಾಲಯ ಹೆಚ್ಚಿನ ಅಂಕಗಳನ್ನು ಪಡೆದದ್ದಕ್ಕಾಗಿ ಚಿನ್ನದ ಪದಕಗಳನ್ನು ನೀಡಿತು. 1957ರಲ್ಲಿ ಕನ್ನಡ ಎಂ.ಎ. ಪರೀಕ್ಷೆಯ ಪ್ರಥಮ ದರ್ಜೆ ಪ್ರಥಮ ರ‍್ಯಾಂಕ್. ಇಲ್ಲೂ ಹೆಚ್ಚಿನ ಅಂಕಗಳನ್ನು ಪಡೆದದ್ದಕ್ಕಾಗಿ ಚಿನ್ನದ ಪದಕ ದೊರೆಯಿತು. 1962ರಲ್ಲಿ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯ ಕುರಿತು ಪ್ರೊ॥ ತೀ. ನಂ. ಶ್ರೀ. ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಯಿಸಿ ಪಿಎಚ್.ಡಿ. ಪದವಿ ಪಡೆದರು.

**ವೃತ್ತಿ ಜೀವನ :**

ಮೈಸೂರು ವಿಶ್ವವಿದ್ಯಾಲಯದಲ್ಲಿ 1953 ರಿಂದ 1968 ರ ವರೆವಿಗೆ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ ಡಾ॥ ಮೂರ್ತಿಯವರು 1969 ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ರೀಡರ್ ಆಗಿ ನೇಮಕಗೊಂಡರು. ಅಂದಿನಿಂದ ನಿವೃತ್ತರಾಗುವವರೆವಿಗೂ (1990) ಅಲ್ಲೇ ಸೇವೆ ಸಲ್ಲಿಸಿದರು. ಅಮೇರಿಕಾದ ಚಿಕಾಗೊ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ 1967ರಲ್ಲಿ ಒಂದು ವರ್ಷ ಕಾಲ ಕನ್ನಡ ಅಧ್ಯಾಪಕರಾಗಿ ಅಲ್ಲಿಗೆ ಹೋಗಿ ಬಂದರು. ಡಾ॥ ಮೂರ್ತಿಯವರನ್ನು ಯು. ಜಿ. ಸಿ. ಸಂದರ್ಶಕ ಪ್ರಾಧ್ಯಾಪಕರನ್ನಾಗಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ 1979-80 ರಲ್ಲಿ ಕಳುಹಿಸಿಕೊಟ್ಟಿತ್ತು. ಡಾ॥ ಮೂರ್ತಿಯವರು ಒಳ್ಳೆಯ ಅಧ್ಯಾಪಕನಿಗಿರಬೇಕಾದ ಸಕಲ ಗುಣಗಳನ್ನೂ ಹೊಂದಿದ್ದರು. ಅವರು ಶ್ರೇಷ್ಠ ವಿದ್ವಾಂಸರು, ಅಧ್ಯಾಪಕರು, ವಾಗ್ಮಿಗಳು. ಅವರ ಪಾಠಪ್ರವಚನ ಕೇಳುವುದೊಂದು ಮರೆಯಲಾಗದ ಅನುಭವ. ವಿದ್ಯಾರ್ಥಿಗಳು ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸಬೇಕೆಂಬುದು ಅವರ ಆಶಯ. ಹೀಗಾಗಿ ಅವರು ಸಂಶೋಧನೆಗಳ ಸಲುವಾಗಿ ನಡೆಸುವ ಕ್ಷೇತ್ರಕಾರ್ಯ ಸಂದರ್ಭದಲ್ಲಿ ವಿದ್ಯಾರ್ಥಿಗಳನ್ನೂ ತಮ್ಮೊಡನೆ ಕರೆದೊಯ್ಯುತ್ತಿದ್ದರು. ಪಠ್ಯಕ್ಕೆ ಸಂಬಂಧಿಸದ ಎಷ್ಟೋ ಹೊಸ ವಿಷಯಗಳು ವಿದ್ಯಾರ್ಥಿಗಳಿಗೆ ಅವರಿಂದ ತಿಳಿಯುತ್ತಿತ್ತು. ಸ್ವತಂತ್ರವಾಗಿ ವಿಚಾರ ಮಾಡಲು ವಿದ್ಯಾರ್ಥಿಗಳನ್ನು ಅವರು ಪ್ರಚೋದಿಸುತ್ತಿದ್ದರು. ಇವರ ಮಾರ್ಗದರ್ಶನದಲ್ಲಿ ಏಳು ಮಂದಿ ವಿದ್ಯಾರ್ಥಿಗಳು ಪಿಎಚ್.ಡಿ. ಪದವಿ ಪಡೆದಿರುವರು.

ಡಾ॥ ಮೂರ್ತಿಯವರು ಸುಪ್ರಸಿದ್ಧ ವಿದ್ವಾಂಸರಾಗಿ ಖ್ಯಾತಿ ಪಡೆದಿರುವುದರಿಂದ ಅನೇಕ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿರುವರು. 1974 ಹಾಗೂ 1990ರಲ್ಲಿ ಶಿವಮೊಗ್ಗ ಹಾಗೂ ಮೈಸೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಗಳ ವಿಭಾಗೀಯ ಅಧ್ಯಕ್ಷ ; 1984ರಲ್ಲಿ ತಿರುವನಂತಪುರದಲ್ಲಿ ನಡೆದ ಅಖಿಲ ಭಾರತ ದ್ರಾವಿಡ ಭಾಷಾ ವಿಜ್ಞಾನ ಸಮ್ಮೇಳನದ ಅಧ್ಯಕ್ಷ ; 1980ರಲ್ಲಿ ಅಮೆರಿಕದ ಸ್ಟಾನ್‌ಫೋರ್ಡ್ ವಿಶ್ವ ವಿದ್ಯಾಲಯದಲ್ಲಿ ನಡೆದ ನಾಲ್ಕನೆ ಅಂತರರಾಷ್ಟ್ರೀಯ ಐತಿಹಾಸಿಕ ಭಾಷಾವಿಜ್ಞಾನ ಸಮ್ಮೇಳನದ ವಿಭಾಗೀಯ ಅಧ್ಯಕ್ಷ ; 1980ರಲ್ಲಿ ಬೆಂಗಳೂರಿನಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾಡೆಮಿಯ ವಾರ್ಷಿಕ ಸಮ್ಮೇಳನಾಧ್ಯಕ್ಷ - ಇವೇ ಮೊದಲಾದ ಗೌರವಸ್ಥಾನ ಪಡೆದಿರುವರು. ಇವುಗಳ ಜೊತೆಗೆ ಮೂರು ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ಕನಿಷ್ಠ ಹದಿನೈದು ರಾಷ್ಟ್ರೀಯ ವಿಚಾರಗೋಷ್ಠಿಗಳಲ್ಲಿ, ಸುಮಾರು ಐವತ್ತು ಪ್ರಾದೇಶಿಕ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ವಿದ್ವದ್‌ಪೂರ್ಣವಾದ ಪ್ರಬಂಧಗಳನ್ನು ಮಂಡಿಸಿರುವರು. ಉಡುಪಿ ಹಾಗೂ ಮೈಸೂರಿನಲ್ಲಿ ನಡೆದ ಎರಡು ಅಂತರರಾಷ್ಟ್ರೀಯ ಜಾನಪದ ಕಾರ್ಯಗಾರಗಳಲ್ಲಿ ವಿಶೇಷ ಉಪನ್ಯಾಸ ನೀಡಿರುವರು.

ಡಾ॥ ಮೂರ್ತಿಯವರು ಅನೇಕ ಶೈಕ್ಷಣಿಕ ಹಾಗೂ ಶೈಕ್ಷಣಿಕೇತರ ಕಾರ್ಯಗಳಲ್ಲಿ ಸದಸ್ಯರಾಗಿ ಭಾಗವಹಿಸಿ ಅಮೂಲ್ಯವಾದ ಹಾಗೂ ರಚನಾತ್ಮಕವಾದ ಸಲಹೆ-ಸೂಚನೆ ನೀಡಿರುವರು. ಡಾ॥ ಮೂರ್ತಿಯವರು ದೇಶದ ಹಲವು ವಿಶ್ವವಿದ್ಯಾಲಯಗಳಲ್ಲಿ ನೇಮಕಾತಿಗಾಗಿ ಸಂದರ್ಶಕರಾಗಿ ಹೋದಾಗ ಯೋಗ್ಯ, ಪ್ರತಿಭಾವಂತ

ವ್ಯಕ್ತಿಗಳನ್ನು ಆಯ್ಕೆ ಮಾಡಿದ್ದುಂಟು. ಆಯ್ಕೆ ಸಮಿತಿಯಲ್ಲಿ ಯೋಗ್ಯ ಅಭ್ಯರ್ಥಿಗಳ ಆಯ್ಕೆಗೆ ಅಡ್ಡಿ ಬಂದಾಗ ಅದನ್ನು ಬಲವಾಗಿ ಪ್ರತಿಭಟಿಸಿದ ನಿದರ್ಶನಗಳೂ ಉಂಟು. ಆಯ್ಕೆ ಸಮಿತಿಯಲ್ಲಿ ಇತ್ತೀಚಿನ ದಿನಗಳಲ್ಲಿ ರಾಜಕೀಯ ನುಸುಳುತ್ತಿರುವುದನ್ನು ಕಂಡು ಬೇಸತ್ತ ಡಾ॥ ಮೂರ್ತಿಯವರು ಸಂದರ್ಶನಕಾರರಾಗಿ ಹೋಗುವುದನ್ನೇ ನಿಲ್ಲಿಸಿರುವರು. ಅನ್ಯಾಯವನ್ನು ಸಹಿಸದ ಡಾ॥ ಮೂರ್ತಿಯವರು ಅಪ್ರಿಯ ಸತ್ಯವನ್ನು ಹೇಳುವ ಮೂಲಕ ಅನೇಕರ ಸ್ನೇಹ-ವಿಶ್ವಾಸಗಳನ್ನು ಕಳೆದುಕೊಂಡದ್ದೂ ಉಂಟು. ನೇರ ಸ್ವಭಾವದ, ಸತ್ಯಕ್ಕೆ ಅಪಚಾರವಾಗುವುದನ್ನು ಸಹಿಸದ, ತಮ್ಮ ಪ್ರಾಮಾಣಿಕತೆಯನ್ನು ಎಂದೂ ಬಿಟ್ಟುಕೊಡದ ಡಾ॥ ಮೂರ್ತಿಯವರು ತಮ್ಮಲ್ಲಿಗೆ ಮೌಲ್ಯ ಮಾಪನಕ್ಕೆ ಬಂದ ಹಲವಾರು ಪಿಎಚ್.ಡಿ. ನಿಬಂಧಗಳನ್ನು ತಿರಸ್ಕರಿಸಿದ್ದುಂಟು : ಒಳ್ಳೆಯ ನಿಬಂಧಗಳನ್ನು ಮನಸಾರೆ ಮೆಚ್ಚಿ ಒಳ್ಳೆಯ ಮಾತುಗಳನ್ನು ಅವುಗಳ ಬಗೆಗೆ ಬರೆದದ್ದೂ ಉಂಟು. ಡಾ॥ ಮೂರ್ತಿಯವರು ಯಾವಾಗಲು ಗುಣಕ್ಕೆ ಪ್ರಾಶಸ್ತ್ಯ ನೀಡುವವರು.

**ಸಂಶೋಧನೆ :**

ಡಾ॥ ಚಿದಾನಂದಮೂರ್ತಿಯವರು ಬಹುಮುಖ ಪ್ರತಿಭೆಯುಳ್ಳ ವಿದ್ವಾಂಸರು. ಸಾಹಿತ್ಯ, ಸಮಾಜ ವಿಜ್ಞಾನ, ಮಾನವಶಾಸ್ತ್ರ, ಭಾಷಾಶಾಸ್ತ್ರ, ಶಾಸನ, ಜಾನಪದ, ಇತಿಹಾಸ, ಕಲೆ-ಹೀಗೆ ಅವರ ಆಸಕ್ತಿಯ ಕ್ಷೇತ್ರಗಳು ಹಲವಾರು. ಹಲವು ಕ್ಷೇತ್ರಗಳ ಅಂತರ ಶಿಸ್ತೀಯ ಅಧ್ಯಯನದಿಂದಾಗಿ ಅವರ ಬರಹಗಳಿಗೆ ಒಂದು ವೈಜ್ಞಾನಿಕ ನೆಲೆ ಪ್ರಾಪ್ತವಾಗಿದೆ. ವೈಜ್ಞಾನಿಕವಾಗಿ ಎಲ್ಲವನ್ನೂ ಪರೀಕ್ಷಿಸುವ ಮನೋಭಾವ ಅವರನ್ನು ಕನ್ನಡದ ಶ್ರೇಷ್ಠ ಸಂಶೋಧಕರನ್ನಾಗಿಸಿದೆ. "ಸಂಶೋಧನೆಯೆನ್ನುವುದು ಸತ್ಯವನ್ನು ಕಾಣಲು ಮಾಡುವ ಒಂದು ಪ್ರಾಮಾಣಿಕ ಪ್ರಯತ್ನ" ಎಂದು ನಂಬಿರುವ ಅವರು ಸಂಶೋಧಕನಲ್ಲಿ "ಆಧಾರಗಳ ಸಹಾಯದಿಂದ ಪುಷ್ಟವಾದ ಸತ್ಯವನ್ನು ಹೇಳುವುದರಲ್ಲಿ ನಿರ್ಭೀತಿ ; ಅವನು ಹೇಳುವ ಸತ್ಯ ಆ ಕಾಲದಲ್ಲಿ ಜನರು ಸತ್ಯವೆಂದು ನಂಬಿರುವ ಭಾವನೆಗೆ ವಿರುದ್ಧವಾಗಿರಬಹುದು ; ಅದರಿಂದ ಅವನಿಗೆ ಸ್ವಲ್ಪ ತೊಂದರೆಯೂ ಆಗಬಹುದು. ಆದರೆ ನಾಳೆ ನಿಲ್ಲುವುದು ಸತ್ಯವೇ ಹೊರತು ಭ್ರಮೆಯಲ್ಲ ; ಭಾವೋದ್ರೇಕವಲ್ಲ - ಎಂಬ ಅರಿವು ಅವನಿಗಿರುತ್ತದೆ" ಎಂಬ ನಿಲುಮೆ ತಾಳಿರುವರು. ತಮ್ಮ ಮಾತಿನಂತೆ ತಮ್ಮ ವ್ಯಕ್ತಿತ್ವವನ್ನೂ ರೂಪಿಸಿಕೊಂಡಿದ್ದ ಅವರು ತಮ್ಮ ಮೊದಲನೆಯ ಪುಸ್ತಕ 'ಶೂನ್ಯ ಸಂಪಾದನೆಯನ್ನು ಕುರಿತು' ಗ್ರಂಥದಲ್ಲಿ ಅಪ್ರಿಯವಾದ ಸತ್ಯವನ್ನು ಹೇಳಿ ಒಂದು ದೊಡ್ಡ ಪ್ರತಿಭಟನೆಯನ್ನೇ ಎದುರಿಸಬೇಕಾಯಿತು. ಡಾ॥ ಚಿದಾನಂದಮೂರ್ತಿಯವರ ಪುಸ್ತಕವನ್ನು ಖಂಡಿಸುವ ಸಲುವಾಗಿ 'ಶೂನ್ಯತತ್ತ್ವವಿಕಾಸ ಮತ್ತು ಶೂನ್ಯಸಂಪಾದನೆ' ಎಂಬ ಗ್ರಂಥ ಹೊರಬಂದಿತು. ಈ ಗ್ರಂಥದ ಬಿಡುಗಡೆಯ ಸಮಾರಂಭದಲ್ಲಿ ಪ್ರೊ॥ ತೀ.ನಂ.ಶ್ರೀ. ಹಾಗೂ ಪ್ರೊ॥ ಡಿ. ಎಲ್. ಎನ್. ರವರನ್ನು ವಾಚಾಮಗೋಚರವಾಗಿ ನಿಂದಿಸಲಾಯಿತು. ಆ ಸಂದರ್ಭ ಕುರಿತು ಡಾ॥ ಮೂರ್ತಿಯವರು ಹೀಗೆ ಹೇಳಿರುವರು " .... ನಾನು ಆಗಿನ್ನೂ ಚಿಕ್ಕವನು, ಬೈಗುಳನ್ನು ತಡೆದುಕೊಳ್ಳಬಹುದಿತ್ತು. ಆದರೆ ನನ್ನ ಗುರುಗಳ ಅನ್ಯಾಯದ ನಿಂದೆ ನನ್ನ ಮನಸ್ಸಿಗೆ ತೀರಾ ನೋವುಂಟು ಮಾಡಿತು. ಅದನ್ನೆಲ್ಲಾ ನುಂಗಿಕೊಂಡೆ ; ಮತ್ತು ಆ ನೋವು ನನ್ನನ್ನು ಬೆಳೆಸಿತು. ಸಂಶೋಧನೆಯ ಕ್ಷೇತ್ರದಲ್ಲಿ ಸತ್ಯದ ಪರವಾಗಿ ದಿಟ್ಟವಾಗಿ ತಲೆ ಎತ್ತಿ ನಿಲ್ಲುವ ಸ್ಥೈರ್ಯವನ್ನು ತಂದುಕೊಟ್ಟಿತು."

ಡಾ॥ ಮೂರ್ತಿಯವರ ಪಿಎಚ್.ಡಿ ನಿಬಂಧ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ವು ಕನ್ನಡದ ಅತ್ಯಂತ ಮಹತ್ವದ ಸಂಶೋಧನ ನಿಬಂಧ. ಸಂಶೋಧನೆ ನಡೆಸುವವರಿಗೆ ಅದೊಂದು ಆಚಾರ್ಯ ಮಾರ್ಗದರ್ಶಿ. ಅವರ ಸಂಶೋಧನ ಲೇಖನಗಳಲ್ಲಿ ಖಚಿತತೆ, ವಿಷಯವನ್ನು ಆಧಾರದೊಂದಿಗೆ ಮನಂಬುಗುವಂತೆ ತಿಳಿಯ ಹೇಳುವ ಪ್ರಾಮಾಣಿಕತೆ, ತಮಗೆ ಸರಿಕಂಡದ್ದನ್ನು ನಿರ್ಭೀತಿಯಿಂದ ಹೇಳುವ ಎದೆಗಾರಿಕೆ - ಎದ್ದು ಕಾಣುವ ಅಂಶಗಳು ಅವರ ಸಂಶೋಧನ ಲೇಖನಗಳಲ್ಲಿ ಯಾವುದಾದರೂ ಒಂದು ಹೊಸ ಆಲೋಚನೆಯಿರುತ್ತದೆ ಇಲ್ಲವೆ ವಿಷಯದ ಬಗೆಗೆ ಅವರದೇ ಆದ ಒಳನೋಟವಿರುತ್ತವೆ. ಅವರಿಗೆ ಸಂಶೋಧನೆಯೆನ್ನುವುದು ನಿರಂತರವಾದ ಹುಡುಕಾಟ. "ಸಂಶೋಧನೆಯಲ್ಲಿ ಸತ್ಯವೊಂದೇ ಉಳಿಯ ತಕ್ಕದ್ದು. ಅದೊಂದೇ ಮಾನ್ಯ. ಜನಪ್ರಿಯತೆಯೊಂದು ಮನುಷ್ಯನನ್ನು ಜಾಗ್ರತೆ ಮುಂದಕ್ಕೆ ಸಾಗಿಸುವ ಮತ್ತು ಬೀಳಿಸುವ ಒಂದು ಜಾರು ಹಾವಸೆಗಲ್ಲು." ಈ ನಿಲುಮೆ ಬಹುಶಃ ಅವರನ್ನು ಕನ್ನಡದ ಶ್ರೇಷ್ಠ ಸಂಶೋಧಕರೆಂದು

ಗೌರವಿಸಲು ಕಾರಣವಾಗಿರಬಹುದು. ಡಾ॥ ಮೂರ್ತಿಯವರ ಸಂಶೋಧನ ತರಂಗ ಸಂಪುಟ ೧ ಮತ್ತು ೨, ವಾಗರ್ಥ, ಗ್ರಾಮೀಣ, ಪಗರಣ, ಲಿಂಗಾಯತ ಅಧ್ಯಯನಗಳು - ಇವು ಅವರ ಸಂಶೋಧನ ಲೇಖನಗಳ ಸಂಕಲನಗಳು. ಸಂಶೋಧನೆ, ವಚನ ಸಾಹಿತ್ಯ, ಬಸವಣ್ಣನವರು, ಮಧ್ಯ ಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಪೂರ್ಣ ಸೂರ್ಯಗ್ರಹಣ-ಒಂದು ಸಮಾಜೋ ಸಾಂಸ್ಕೃತಿಕ ಸಮೀಕ್ಷೆ, ಭಾಷಾ ವಿಜ್ಞಾನದ ಮೂಲತತ್ವಗಳು — ಇವು ಅವರ ಸ್ವತಂತ್ರ ಕೃತಿಗಳು. ಡಾ॥ ಮೂರ್ತಿಯವರ ಒಂದೊಂದು ಕೃತಿಯೂ ತನ್ನ ವಿಶಿಷ್ಟ ಕಾರಣಗಳಿಗಾಗಿ ವಿದ್ವದ್‌ವಲಯದಲ್ಲಿ ಮಾನ್ಯತೆ ಪಡೆದಿವೆ : ಕರ್ನಾಟಕ ಸಾಹಿತ್ಯ ಅಕಾಡೆಮಿ, ದೇವರಾಜ ಬಹುದ್ದೂರ್ ದತ್ತಿ, ತೀ.ನಂ.ಶ್ರೀ. ಸ್ಮಾರಕ ದತ್ತಿ — ಮೊದಲಾದ ಪ್ರತಿಷ್ಠಿತ ಸಂಸ್ಥೆಗಳಿಂದ ಗೌರವ ಪಡೆದಿವೆ. ಭಾಷಾ ವಿಜ್ಞಾನದ ಸಂಶೋಧನೆಗಾಗಿ 1977ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಪ್ರಶಸ್ತಿ ; ಸಂಶೋಧನೆಗಳಿಗಾಗಿ 1984ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ; ಕನ್ನಡ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ನಡೆಸಿದ ಸಂಶೋಧನೆಗಳಿಗಾಗಿ 1985ರಲ್ಲಿ ಕರ್ನಾಟಕ ಸರಕಾರದ ರಾಜ್ಯ ಪ್ರಶಸ್ತಿ - ಹೀಗೆ ಗೌರವ ಸನ್ಮಾನಗಳು ಪ್ರಶಸ್ತಿ ರೂಪದಲ್ಲಿ ಡಾ॥ ಮೂರ್ತಿಯವರಿಗೆ ದೊರೆತಿವೆ.

**ಸಾಮಾಜಿಕ ಚಟುವಟಿಕೆಗಳು :**

ನಾಡಿನ ಶ್ರೇಷ್ಠ ಸಂಶೋಧಕರಾಗಿ ಶೈಕ್ಷಣಿಕ ವಲಯದಲ್ಲಿ ತಮ್ಮದೇ ಆದ ವರ್ಚಸ್ಸನ್ನು ಹೊಂದಿದ್ದ ಡಾ॥ ಮೂರ್ತಿಯವರು ಸಾಮಾಜಿಕ ಚಟುವಟಿಕೆಗಳಿಗೆ ತಮ್ಮನ್ನು ಅರ್ಪಿಸಿಕೊಂಡದ್ದು ಅವರ ಬದುಕಿನಲ್ಲಿ ಒಂದು ದೊಡ್ಡ ತಿರುವು. ನೆಲ ಜಲ ಉದ್ಯೋಗ ಹಾಗೂ ಭಾಷೆ - ಇವುಗಳ ಪ್ರಶ್ನೆ ಬಂದಾಗ ಕರ್ನಾಟಕ ಕನ್ನಡ-ಕನ್ನಡಿಗರಿಗೆ ಆಗುತ್ತಿದ್ದ ಅನ್ಯಾಯ ನೋಡಿ ಕೆರಳಿದ ಡಾ॥ ಮೂರ್ತಿಯವರು ಇದರ ವಿರುದ್ಧ ಹೋರಾಡಲು ಸಂಘಟನೆಯೊಂದರ ಅಗತ್ಯವನ್ನು ಕಂಡುಕೊಂಡರು. ಇದರ ಫಲವಾಗಿ 'ಸಾಹಿತಿಗಳ ಕಲಾವಿದರ ಬಳಗ' ಜನ್ಮ ತಾಳಿತು. ಇದರ ಸಂಚಾಲಕರಾದ ಡಾ॥ ಮೂರ್ತಿಯವರು ನಾಡಿನ ಯುವ ಶಕ್ತಿಯನ್ನು ಸಂಘಟಿಸುವ ಹಾಗೂ ಸಾಮಾಜಿಕ ಅನ್ಯಾಯಗಳ ವಿರುದ್ಧ ಹೋರಾಟ ನಡೆಸುವ ದಿಶೆಯಲ್ಲಿ ಅವರು ಕಾರ್ಯ ಪ್ರವೃತ್ತರಾದರು. 1982ರ ಐತಿಹಾಸಿಕ ಗೋಕಾಕ್ ಚಳುವಳಿಯಲ್ಲಿ ಬಳಗವು ಮುಂಚೂಣಿಯಲ್ಲಿದ್ದಿತು. ಡಾ॥ ಸರೋಜಿನಿ ಮಹಿಷಿ ಆಯೋಗ ರಚನೆಗೊಳ್ಳಲು ಬಳಗವು ನಡೆಸಿದ ಚಳುವಳಿಯೇ ಕಾರಣ ಎಂದರೆ ತಪ್ಪಾಗಲಾರದು. ಕರ್ನಾಟಕವು ತಮಿಳರು, ಕೇರಳೀಯರು ಗುಜರಾತಿಗಳ ಪಾಲಾಗುತ್ತಿರುವ ವ್ಯಥೆಯ ಕಥೆ ಡಾ॥ ಮೂರ್ತಿಯವರನ್ನು ನೋಯಿಸಿತು. ಇಲ್ಲಿನ ಕೇಂದ್ರ ಹಾಗೂ ರಾಜ್ಯ ಸರಕಾರದ ಉದ್ದಿಮೆಗಳಲ್ಲಿ ಕನ್ನಡಿಗರು ಉದ್ಯೋಗ ಪಡೆಯುವುದು ಕಷ್ಟವೆನ್ನಿಸಿದಾಗ ಅವು ಅನ್ಯ ರಾಜ್ಯದವರ ಪಾಲಾಗುತ್ತಿರುವುದನ್ನು ಕಂಡಾಗ ಈ ಸಮಸ್ಯೆಯ ಪರಿಹಾರವಾಗಿ ಬಳಗವು ಚಳುವಳಿ ನಡೆಸಿತು. ಈಗ ಕನ್ನಡಿಗರಿಗೆ ಉದ್ಯೋಗ ನೀಡಬೇಕೆಂಬ ಸರ್ಕಾರಿ ಆಜ್ಞೆ ಹೊರಬರುತ್ತಿರುವುದು ಸಂತೋಷದ ಸಂಗತಿ. ಬ್ಯಾಂಕುಗಳಲ್ಲಿ ಹಾಗೂ ಕೇಂದ್ರ ಸರಕಾರದ ಕಛೇರಿಗಳಲ್ಲಿ ಹಿಂದಿಯನ್ನು ಒತ್ತಾಯವಾಗಿ ಹೇರುತ್ತಿರುವುದರ ವಿರುದ್ಧ ಬಳಗವು ಚಳುವಳಿಯನ್ನು ನಡೆಯಿಸಿತು. ದೂರದರ್ಶನದಲ್ಲಿ ಕನ್ನಡೇತರರೇ ಹೆಚ್ಚಾಗಿ ಇರುವುದರ ವಿರುದ್ಧ ಹಾಗೂ ಅಲ್ಲಿ ಕನ್ನಡ ಕಾರ್ಯಕ್ರಮಗಳ ಬದಲಾಗಿ ಕನ್ನಡೇತರ ಕಾರ್ಯಕ್ರಮಗಳೇ ಹೆಚ್ಚು ಹೆಚ್ಚಾಗಿ ಪ್ರಸಾರವಾಗುತ್ತಿದ್ದುದರ ವಿರುದ್ಧ ಬಳಗವು ಉಗ್ರವಾದ ಹೋರಾಟವನ್ನು ನಡೆಯಿಸಿತು. ದೂರದರ್ಶನ ಕಛೇರಿಯ ಎದುರು ಧರಣಿ ನಡೆಸಿತು. ಈ ಸಮಸ್ಯೆಯ ಬಗೆಗೆ ಜನರ ಗಮನ ಸೆಳೆಯಲು ಟಿ.ವಿ. ಪ್ರಸಾರವನ್ನು ಸ್ತಬ್ಧಗೊಳಿಸುವ ಕಾರ್ಯದಲ್ಲೂ ಬಳಗ ಪ್ರಯತ್ನ ನಡೆಯಿಸಿ ಯಶಸ್ವಿಯಾಯಿತು. ಈ ಹೋರಾಟದ ಫಲವಾಗಿ ಈಗ ದೂರದರ್ಶನದಲ್ಲಿ ಕನ್ನಡ ಕಾರ್ಯಕ್ರಮಗಳು ಹೆಚ್ಚು ಹೆಚ್ಚಾಗಿ ಪ್ರಸಾರಗೊಳ್ಳಲಾರಂಭಿಸಿದವು ; ಕನ್ನಡ ಕಲಾವಿದರಿಗೆ ಅವಕಾಶ ದೊರೆಯತೊಡಗಿತು ; ಕನ್ನಡ ಕಾರ್ಯಕ್ರಮಗಳ ಪ್ರಸಾರದ ವೇಳೆಯನ್ನು ಕೇಂದ್ರ ಸರಕಾರ ಹೆಚ್ಚಿಸಿತು ; ಕನ್ನಡಿಗರಿಗೆ ಅಲ್ಲಿ ಉದ್ಯೋಗ ದೊರೆಯುವಂತಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಚುನಾವಣೆಯಲ್ಲಿ ಆದಂತಹ ಅನ್ಯಾಯವನ್ನು ಪ್ರತಿಭಟಿಸಲು ಬಳಗವು ಶ್ರಮಿಸಿತು. ಇದರ ಫಲವಾಗಿ ರಾಜ್ಯಸರಕಾರವು ಒಂದು ಆಯೋಗವನ್ನು ನೇಮಕ ಮಾಡಿ, ವಿಚಾರಣೆ ನಡೆಯಿಸಿತು. ಚುನಾವಣೆಯಲ್ಲಿ ಅನ್ಯಾಯವಾಗಿದೆ ಎಂದು ಕಂಡುಬಂದ

ಮೇಲೆ ಸರಕಾರ ಕನ್ನಡ ಸಾಹಿತ್ಯ ಪರಿಷತ್ತನ್ನು ತನ್ನ ಅಧಿಕಾರಕ್ಕೆ ತೆಗೆದುಕೊಂಡು ಅದರ ಕಾರ್ಯನಿರ್ವಹಣೆಗೆ ಓರ್ವ ದಕ್ಷ ಅಧಿಕಾರಿಯನ್ನು ನೇಮಿಸಿತು.

ಮುಖ್ಯಮಂತ್ರಿ ಶ್ರೀ ಆರ್. ಗುಂಡೂರಾವ್‌ರವರು ವಿಶ್ವಕನ್ನಡ ಸಾಹಿತ್ಯ ಸಮ್ಮೇಳನವನ್ನು ನಡೆಸ ಹೊರಟಾಗ ಅದನ್ನು ಬಳಗವು ಉಗ್ರವಾಗಿ ಪ್ರತಿಭಟಿಸಿತು. ಇಂತಹ ಸಮ್ಮೇಳನದಿಂದಾಗಿ ಹಣ ನೀರಿನಂತೆ ವ್ಯಯವಾಗುತ್ತದೆಯೇ ಹೊರತು ಪ್ರತಿಫಲವೇನೂ ಇಲ್ಲ. ಸಮ್ಮೇಳನ ನಡೆಸುವ ಬದಲು ಕನ್ನಡದ ಕೆಲಸಗಳಿಗಾಗಿ ಹಣವನ್ನು ಖರ್ಚುಮಾಡಿ ಎಂದು ಬಳಗ ಸರಕಾರದ ನಿಲುವನ್ನು ಟೀಕಿಸಿತು. ಈ ಪ್ರತಿಭಟನೆಯನ್ನು ಪರಿಗಣಿಸದೆ ಸರ್ಕಾರ ವಿಶ್ವಕನ್ನಡ ಸಮ್ಮೇಳನ ಅದ್ದೂರಿಯಿಂದ ನಡೆಯಿಸಿತು. ಈ ಸಂದರ್ಭದಲ್ಲಿ ನಡೆದ ಘಟನೆಯೊಂದು ಮುಖ್ಯವೆನ್ನಿಸಿದೆ. ಸಮ್ಮೇಳನದ ನೆನಪಿಗಾಗಿ 250 ಕನ್ನಡ ಪುಸ್ತಕಗಳನ್ನು ಹೊರತರುವ ಕಡಿಮೆ ಬೆಲೆಗೆ ಅದನ್ನು ಕನ್ನಡಿಗರಿಗೆ ತಲುಪಿಸುವ ಯೋಜನೆಯನ್ನು ಸರ್ಕಾರ ಸಿದ್ಧಪಡಿಸಿತ್ತು. ಈ ಪುಸ್ತಕಗಳಲ್ಲಿ ಡಾ॥ ಮೂರ್ತಿಯವರ 'ಪೂರ್ಣ ಸೂರ್ಯ ಗ್ರಹಣ-ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ'ವೂ ಸೇರಿತ್ತು. ಡಾ॥ ಮೂರ್ತಿಯವರಿಗೆ ಈ ಕೃತಿ ಹೊರಬರುವುದರಿಂದ ಆರ್ಥಿಕವಾಗಿ ಸಹಾಯವಾಗುತ್ತಿತ್ತು. ಸಮ್ಮೇಳನವನ್ನು ಬಳಗದ ಸಂಚಾಲಕನಾಗಿ ಬಹಿಷ್ಕರಿಸಿರುವುದರಿಂದ ಸರ್ಕಾರ ನನ್ನ ಪುಸ್ತಕವನ್ನು ಪ್ರಕಟಿಸಕೂಡದು ಎಂದು ಪತ್ರ ಬರೆದರು. ಇದು ಡಾ॥ ಮೂರ್ತಿಯವರ ದೊಡ್ಡ ಗುಣ. ಯಾವುದೇ ಚಳುವಳಿ ಯಶಸ್ವಿಯಾಗಲು ಅದರ ನೇತಾರರ ಕ್ರಿಯಾಶೀಲ ಶುಭ್ರ ವ್ಯಕ್ತಿತ್ವವನ್ನು ಅವಲಂಭಿಸಿರುತ್ತದೆ. ಬಳಗವು ನಡೆಸಿರುವ ಅನೇಕ ಮಹತ್ತರ ಚಳುವಳಿಗಳು ಫಲಪ್ರದವಾಗಲು ಡಾ॥ ಮೂರ್ತಿಯವರು ಸ್ಫಟಿಕ ಸದೃಶ ವ್ಯಕ್ತಿತ್ವವೇ ಕಾರಣವೆಂದರೆ ತಪ್ಪಾಗಲಾರದು.

ಕನ್ನಡ ವಿಶ್ವವಿದ್ಯಾಲಯ ಪ್ರಾರಂಭಗೊಳ್ಳಬೇಕೆಂದು ಬಳಗವು ಸತತವಾಗಿ ಹೋರಾಟವನ್ನು ನಡೆಯಿಸಿತು. ಇದರ ಪರ ವಿರೋಧ ಅಭಿಪ್ರಾಯಗಳು ನಮ್ಮ ಪ್ರತಿಷ್ಠಿತ ವಿದ್ವಾಂಸರಿಂದ ಬಂದುವು. ಈ ಹೋರಾಟದಲ್ಲಿ ಡಾ॥ ಮೂರ್ತಿಯವರು ವಹಿಸಿದ ಪಾತ್ರವೇನೆಂಬುದನ್ನು ಅವರ ನಿಕಟವರ್ತಿಗಳು ಬಲ್ಲರು. ತಮ್ಮ ಉದ್ದೇಶದ ಈಡೇರಿಕೆಗಾಗಿ ಸಭೆ ನಡೆಯಿಸಿ, ಎಂ.ಎಲ್.ಎ. ಗಳನ್ನು, ಮಂತ್ರಿಗಳನ್ನು, ಮುಖ್ಯಮಂತ್ರಿಯರನ್ನು ಮೇಲಿಂದ ಮೇಲೆ ಭೇಟಿಮಾಡಿ ಕನ್ನಡ ವಿಶ್ವವಿದ್ಯಾಲಯದ ಅಗತ್ಯವನ್ನು ಅವರಿಗೆ ವಿವರಿಸಿ ಮನಗಾಣಿಸಿದರು. ಆ ಘಟ್ಟದ ದೈಹಿಕ ಹಾಗೂ ಮಾನಸಿಕ ಶ್ರಮವನ್ನು ಮಾತಿನಲ್ಲಿ ಹೇಳಲಾಗದು. ಈ ಸತತ ಪ್ರಯತ್ನದ ಫಲವಾಗಿ ಸರ್ಕಾರ ಕನ್ನಡ ವಿಶ್ವ ವಿದ್ಯಾಲಯವನ್ನು ಹಂಪೆಯಲ್ಲಿ ಪ್ರಾರಂಭಿಸಲು ತೀರ್ಮಾನಿಸಿ ಕಾರ್ಯಪ್ರವೃತ್ತವಾಗಿದೆ. ಕನ್ನಡ ವಿಶ್ವ ವಿದ್ಯಾಲಯದ ರೂಪರೇಷೆ (Blue Print) ಡಾ॥ ಮೂರ್ತಿಯವರ ಹಾಗೂ ಪ್ರೊ॥ ಸದಾಶಿವ ಒಡೆಯರ್ ರವರ ಸಂಯುಕ್ತ ಪ್ರಯತ್ನದ ಫಲ. ಡಾ॥ ಮೂರ್ತಿಯವರ ಬಹುದಿವಸಗಳ ಕನಸು ನನಸಾಗುತ್ತಿರುವುದು ಸಂತೋಷದ ಸಂಗತಿ.

ಡಾ॥ ಮೂರ್ತಿಯವರು ಕನ್ನಡಿಗರ ಸಂಘಟನೆ ಹಾಗೂ ಕಾರ್ಯ ಚಟುವಟಿಕೆಗಳು ಬೆಂಗಳೂರಿಗೆ ಮಾತ್ರ ಸೀಮಿತವಾಗಿರದೆ ರಾಜ್ಯಮಟ್ಟದಲ್ಲಿ ಕನ್ನಡ ಪರ ಸಂಘಟನೆಯಾಗಬೇಕೆಂದು 'ಕನ್ನಡ ಶಕ್ತಿ ಕೇಂದ್ರ' ವನ್ನು ಪ್ರಾರಂಭಿಸಿದರು. ಡಾ॥ ಮೂರ್ತಿಯವರೇ ಅದರ ಕಾರ್ಯಾಧ್ಯಕ್ಷರು. ಈಗ ಶಕ್ತಿ ಕೇಂದ್ರ ರಾಜ್ಯದ ಹದಿನಾಲ್ಕು ಜಿಲ್ಲೆಗಳಿಗೆ ತನ್ನ ಕಾರ್ಯ ಚಟುವಟಿಕೆಗಳನ್ನು ಹರಡಿಕೊಂಡಿದೆ, ತನ್ನ ಶಾಖೆಗಳನ್ನು ತೆರೆದಿದೆ. ಕರ್ನಾಟಕ ಹಿತಾಸಕ್ತಿಗಳಿಗಾಗಿ ಜನರ ಅಭಿಪ್ರಾಯಗಳನ್ನು ರೂಪುಗೊಳಿಸಿ ಕೇಂದ್ರ ಹಾಗೂ ರಾಜ್ಯ ಸರಕಾರಗಳಿಂದ ಕೆಲಸ ಮಾಡಿಸುವ ಗುರುತರ ಜವಾಬ್ದಾರಿಯನ್ನು ಕನ್ನಡ ಶಕ್ತಿ ಕೇಂದ್ರವು ಹೊತ್ತಿದೆ. ತಮ್ಮ ಮನೆಯನ್ನೇ ಸದ್ಯಕ್ಕೆ ಕನ್ನಡ ಶಕ್ತಿ ಕೇಂದ್ರ ಕಛೇರಿಯನ್ನಾಗಿ ಮಾಡಿಕೊಂಡಿರುವ ಡಾ॥ ಮೂರ್ತಿಯವರು ಕನ್ನಡದ ಕೆಲಸಗಳಿಗಾಗಿ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಲು ಕನ್ನಡದ ಪ್ರಾಧ್ಯಾಪಕ ಹುದ್ದೆಯಿಂದ ಸ್ವಯಂ ನಿವೃತ್ತಿ ಪಡೆದಿರುವರು. ನಾಡಿನ ಅನೇಕ ಜ್ವಲಂತ ಸಮಸ್ಯೆಗಳು ಪರಿಹಾರ ಕಾಣಲು ತವಕಿಸಿವೆ. ಡಾ॥ ಮೂರ್ತಿಯವರದು ಹಠದ ಸ್ವಭಾವ. ಈ ಹಠ ಕನ್ನಡ ಪರವಾದದು ; ಸಾತ್ವಿಕವಾದುದು. ತಮ್ಮ ಧ್ಯೇಯ ಉದ್ದೇಶಗಳ ಈಡೇರಿಕೆಗಾಗಿ ಯಾವ ತ್ಯಾಗ - ಬಲಿದಾನಕ್ಕಾದರೂ ಸಿದ್ಧ. ಅಂತಹ ಗಟ್ಟಿ ಮನಸ್ಸು, ಚಳುವಳಿ ಡಾ॥ ಮೂರ್ತಿಯವರನ್ನು ಜನರ ಸಮೀಪಕ್ಕೆ ಕರೆದು ತಂದಿದೆ. ಕಾರ್ಮಿಕರ ಸಮಸ್ಯೆಗಳನ್ನು ಅಥವಾ

ಯಾವುದೇ ಸಮಸ್ಯೆಯನ್ನು ತೆರೆದ ಮನಸ್ಸಿನಿಂದ ವಿಚಾರಮಾಡುವ ಮಾಗಿದ ಮನಸ್ಸು ಅವರಿಗೆ ಈಗ ಒದಗಿದೆ. ಚಳುವಳಿ ಅವರ ಮನಸ್ಸು 'ಕನ್ನಡ ಕನ್ನಡಿಗ ಕರ್ನಾಟಕ' ದ ಪರವಾಗಿ ದುಡಿಯಲು ಇನ್ನಷ್ಟು ಗಟ್ಟಿಯಾಗುತ್ತಿದೆ. ಚಳುವಳಿ ಅವರ ಕಣ್ತೆರೆಸಿದೆ. ಜನರ ನೋವು-ಸಂಕಟಗಳ-ವೇದನೆಗಳ ಅರಿವು ಮೂಡಿಸಿದೆ. ಹೊಗಳಿಕೆ ತೆಗಳಿಕೆಗಳನ್ನು ಸಮಾನವಾಗಿ ಸ್ವೀಕರಿಸುವ ಮನೋಭಾವವನ್ನು ಬೆಳೆಸಿದೆ. ಹಿರಿಯ ವ್ಯಕ್ತಿಗಳ ದೌರ್ಬಲ್ಯಗಳನ್ನು, ಪೊಳ್ಳುತನವನ್ನು, ಗೋಮುಖ ವ್ಯಾಘ್ರತನವನ್ನು ಅವರು ಕಂಡಿದ್ದಾರೆ. ಇವೆಲ್ಲದರ ನಡುವೆ ಸಮಚಿತ್ತತೆಯನ್ನು ರೂಢಿಸಿಕೊಂಡು 'ಕನ್ನಡ ಕನ್ನಡಿಗ ಕರ್ನಾಟಕ' ಸಮಸ್ಯೆಗಳನ್ನು ಪರಿಹರಿಸುವ ದಿಶೆಯಲ್ಲಿ ಅವರ ಮನಸ್ಸು ಸದಾ ಕಾರ್ಯಶೀಲವಾಗಿದೆ. ಈಗ ಡಾ॥ ಮೂರ್ತಿಯವರ ಉಸಿರಾಟದಲ್ಲಿ ಕೇಳಿ ಬರುತ್ತಿರುವುದು. 'ಕನ್ನಡ ಕನ್ನಡಿಗ ಕರ್ನಾಟಕ' ವೆಂಬ ಮಂತ್ರ.

ಕನ್ನಡಿಗರಿಗೆ ಆಗುತ್ತಿರುವ ಅನ್ಯಾಯಗಳನ್ನು ನೋಡಿಯೂ ತಟಸ್ಥರಾಗಿರುವ ಜನತೆಯ ಬಗೆಗೆ ಡಾ॥ ಮೂರ್ತಿಯವರಿಗೆ ತೀವ್ರ ನಿರಾಶೆಯಾಗಿದೆ. ಜನತೆ ಎಚ್ಚರಗೊಳ್ಳುವವರೆವಿಗೂ ಪರಿಸ್ಥಿತಿ ಬದಲಾಗದು ಬದಲಾವಣೆಯಾಗಬೇಕಾದರೆ ಜನ ಜಾಗೃತರಾಗಬೇಕು. ಎಷ್ಟೇ ಕಷ್ಟವಾದರೂ ಜಡತೆಯಿಂದ ಮೈ ಮರೆತಿರುವ ಕನ್ನಡಿಗರನ್ನು ಎಚ್ಚರಗೊಳಿಸಬೇಕು. ಅದಕ್ಕಾಗಿಯೇ ಈ ಚಳುವಳಿ, ಹೋರಾಟ. ಈ ನಿರಾಶೆಯ ವಾತಾವರಣದಲ್ಲಿ ಡಾ॥ ಮೂರ್ತಿಯವರು ಭವಿಷ್ಯದ ಉತ್ತಮಿಕೆಯ ಕನಸು ಕಾಣುತ್ತಿರುವರು. ಜನ ಜಾಗೃತರಾಗದ ಹೊರತು ಸಂಘಟನೆಗೆ ಬೆಲೆಯಿಲ್ಲ. ಜನಜಾಗೃತಿ ಡಾ॥ ಮೂರ್ತಿಯವರ ಧ್ಯೇಯ, ಗುರಿ ; ಅದರ ಈಡೇರಿಕೆಗಾಗಿ ಹಗಲಿರುಳು ಶ್ರಮಿಸುತ್ತಿರುವುದು. ಒಳ್ಳೆಯ ದಿನಗಳು ಬರಲಿ, ಡಾ॥ ಮೂರ್ತಿಯವರ ಆಶೋತ್ತರ ನೆರವೇರಲಿ ಎಂದು ತೆರದ ಮನಸ್ಸಿನಿಂದ ನಾನು ಹಾರೈಸುವೆ.

---

ಯಾವ ವಿಶ್ವಮಾತೆಯನ್ನು ನಾವು ಸೇವಿಸಿದರೂ ನಮ್ಮ ಮಾತೆಯನ್ನು ಮಾತ್ರ ಬಿಡುವಂತಿಲ್ಲ. ನಮ್ಮ ತಾಯಿ ಎಷ್ಟೇ ಬಡವೆಯಾದರೂ ಆಕೆಯನ್ನು ಕೀಳಾಗದಂತೆ ಮಕ್ಕಳು ನೋಡಿಕೊಳ್ಳಬೇಕು. ವಾಸ್ತವವಾಗಿ ನಮ್ಮ ತಾಯಿ ಬಡವೆಯಲ್ಲ. ಆಕೆಗಾಗಿ ನಾವು ಹೆಮ್ಮೆಯಿಂದಿರಬಹುದಾಗಿದೆ. ಆಕೆಯ ಪಾದಪದ್ಮದ ಮೇಲೆ ಭಕ್ತಿಯಿಂದ, ಪ್ರೀತಿಯಿಂದ ಹೂವಿಟ್ಟು, ಬೇಕಾದರೆ ಪ್ರಪಂಚವನ್ನೇ ಸುತ್ತಿ ಬರೋಣ. ಯಾವ ಆಕ್ಷೇಪಣೆಯೂ ಇಲ್ಲ.

**ಬಿ. ಎಂ. ಶ್ರೀ.**

# "ಶಾಲೆಗಳಲ್ಲಿ ಕನ್ನಡ ಬೋಧನೆ"

ವಸಂತಲಕ್ಷ್ಮಿ ಕೆ.

ಜಗತ್ತಿನಲ್ಲಿ ಜನಿಸಿದ ಮುಗ್ಧ ಮಗುವಿನ 'ಶಿಕ್ಷಣ' ಸರ್ವತೋಮುಖ ಪ್ರಗತಿಗೆ ಕಾರಣವಾಗಿ, ಅವನನ್ನು ಸಮಾಜದಲ್ಲಿ ಸುಸಂಸ್ಕೃತ, ಯೋಗ್ಯ ಪ್ರಜೆಯಾಗಿ ಪರಿವರ್ತಿಸುತ್ತದೆ. ಇದೇ ಶಿಕ್ಷಣದ ಗುರಿಯಾಗಿದ್ದು, ಹೀಗೆ ಮಗುವನ್ನು ಸಿದ್ಧಪಡಿಸುವ ಹೊಣೆ ಶಿಕ್ಷಣ ನೀಡ ಬಲ್ಲ ಶಿಕ್ಷಕನದಾಗಿದೆ. ಮಾನವ ಸಂಘಜೀವಿ. ಇದರಿಂದ ಮಗುವಿಗೆ ತನ್ನ ಮನದಾಳದಲ್ಲಿ ಮೂಡುವ ಭಾವನೆ, ಚಿಂತನೆಗಳನ್ನು ಪ್ರಕಟಪಡಿಸಲು ತನಗೆ ಅಗತ್ಯವಾದ ವಿಷಯಗಳನ್ನು ಕೇಳಿ ತಿಳಿಯಲು ಭಾಷೆ ಅತ್ಯಗತ್ಯ ವಾಗಿದೆ. "ಭಾಷೆ" ಕೇವಲ ಭಾವನೆ, ಚಿಂತನೆಗಳನ್ನು ಬಿಂಬಿಸುವುದಲ್ಲದೇ ತನ್ಮೂಲಕ ಆ ವ್ಯಕ್ತಿಯ ಮಾನಸಿಕ ಸ್ಥಿತಿಗತಿಯನ್ನು ಪ್ರವೃತ್ತಿಯನ್ನು ಸೂಚಿಸುತ್ತದೆ ಆದ್ದರಿಂದಲೇ ಮಾತುಬಲ್ಲವ ಮಾಣಿಕ ತಂದ, ಮಾತರಿ ಯದವ ಜಗಳ ತಂದ, ಎಂಬ ಗಾದೆಯೇ, ಇದೆ. ಒಟ್ಟಿ ನಲ್ಲಿ ಮಗು ಸಾಂಘಿಕ ಜೀವಿಯಾಗಿ ಬದುಕಿನ ಸಾಮರಸ್ಯದ ತನಿಯನ್ನು ಸವಿಯಲು, ಭಾಷೆ ಅತ್ಯಗತ್ಯ ಮಾಧ್ಯಮ ವಾಗಿದೆ. ಅಂತೇ ಬದುಕನ್ನು ಬೆಳಗಿಸುವ ಭಾಷಾ ಬೋಧಕನ ಹೊಣೆಯು, ಉಳಿದ ವಿಷಯ ಬೋಧಕರಿ ಗಿಂತ ಪ್ರಮುಖವಾದದ್ದಾಗಿದೆ.

"ಶಾಲೆಗಳಲ್ಲಿ ಕನ್ನಡ ಬೋಧನೆ" ಯ ಬಗೆಗೆ, ಕನ್ನಡ ಬೋಧಕನ ಬಗೆಗೆ ಚಿಂತಿಸಿದಾಗ, ಅವರ ಬೋಧನೆಯ ಸಾಮರ್ಥ್ಯವು ವಿದ್ಯಾರ್ಥಿಯ ಕಲಿಕೆಯಿಂದ ಸ್ಪಷ್ಟವಾಗುತ್ತಿದ್ದು - ಬೋಧನೆ, ಕಲಿಕೆಗಳು ಒಟ್ಟಾಗಿ ಸಾಗುವ 'ಪೂರ'ದಂತಿದೆ. ಇವು ಒಂದಕ್ಕೊಂದು ಪೂರಕ ಪರಿಪೂರಕಗಳು, ಆದ್ದರಿಂದ ಇಲ್ಲಿ ಇವ್ಮೊಗದಿಂದ ಆಲೋಚಿಸಲಾಗಿದೆ. ವಿದ್ಯಾರ್ಥಿಯ ಕಲಿಕೆ ಮನೆ, ಶಾಲೆ ಮತ್ತು ಸಮಾಜದ ಪರಿಸರದಿಂದ ಪೂರ್ಣಗೊಳ್ಳುತ್ತದೆ. ಮಗು ಪ್ರತಿ ನಿಮಿಷ ಗಳಿಸುವ ಎಲ್ಲ ಅನುಭವವೂ ಕಲಿ ಕೆಯೇ ಆಗಿದ್ದು ಅವನ ಪ್ರಗತಿಗೆ ಕಾರಣವಾಗುತ್ತದೆ. ಈ ನಿಟ್ಟಿನಲ್ಲಿ ನೋಡಿದಾಗ - ಮಗುವಿಗೆ ಆರಂಭ ದಿಂದಲೇ ಅನೇಕರ ಮನೆಯಲ್ಲೇ ಕನ್ನಡದ ಬಗ್ಗೆ ಅನಾದರ ಕಾಣಿಸುತ್ತದ. ವಿದ್ಯಾರ್ಥಿ ಕನ್ನಡ ಪುಸ್ತಕ ಓದುತ್ತಿದ್ದರೆ, ಕನ್ನಡ ಬಿಟ್ಟು ಬೇರೆ ಇಲ್ಲವೇ ನಿಂಗೇ ! ಎಂದು ಗದರುವುದು, ಪೋಷಕರು ತಮ್ಮ ಅಂತಸ್ತು, ಗೌರವಗಳನ್ನು ಮೆರಸಲು ಹೆಚ್ಚು ಹಣ ತೆತ್ತು ಇಂಗ್ಲೀಷ್ ಶಾಲೆಗಳಿಗೆ ಕಳಿಸುವುದು - ಮನೆಯಲ್ಲೂ ಮಕ್ಕಳೊಂದಿಗೆ ಇಂಗ್ಲೀಷನಲ್ಲೇ ವ್ಯವಹರಿಸುವುದು - ಈ ಸನ್ನಿವೇಶ ಗಳಲ್ಲೆಲ್ಲ ಕನ್ನಡ ಭಾಷೆ ಮಾತೃ ಭಾಷೆಯಾಗಿ ಸಹಜ ವಾಗಿ ರಕ್ತಗತವಾಗಿದ್ದರೂ, ರಕ್ತದಂತೆ ಒಳಪ್ರವಹಿಸಿ, ಹಿಂದೆಸರಿದಿದೆ. ಹೀಗೆ ಮನೆಯ ಪರಿಸರದಲ್ಲೇ ಮಗು ವಿಗೆ ಕನ್ನಡದ ಬಗೆಗೆ "ಅನಾದರದ ಬೀಜ" ಬಿತ್ತ ಲಾಗಿದೆ. ಇಂಥ ಪರಿಸರದಲ್ಲಿ ಬೆಳೆದು ಬಂದ ವಿದ್ಯಾರ್ಥಿಗೆ ಕನ್ನಡದ ಭಾಷಾಜ್ಞಾನ ಉಂಟು ಮಾಡಲು, 'ಕನ್ನಡ ಪ್ರೇಮ' ವನ್ನು ಹುಟ್ಟಿಸಲು, ಕನ್ನಡ ಶಿಕ್ಷಕನು ಪಡುವ ಪಾಡು, ಒಂದು ಹೋರಾಟವೇ ಆಗಿದೆ.

ಸಮಾಜದ ಪರಿಸರದಲ್ಲಿ ಮಗುವಿಗೆ, ಕನ್ನಡೇತರ ಭಾಷೆಗಳ ಆಕರ್ಷಣೆಯೇ ಹೆಚ್ಚಾಗಿದೆ. ಇಂಗ್ಲೀಷ್ ಬಲ್ಲ ವಿದ್ಯಾರ್ಥಿಗಳು ತಮ್ಮದೇ ಆದ ಒಣಜಂಬ, ಪ್ರತಿಷ್ಠೆ ಗಳನ್ನು ಬೆಳೆಸಿಕೊಂಡು ಇಂಗ್ಲೀಷ್ ಬಾರದ ವಿದ್ಯಾರ್ಥಿ ಗಳನ್ನು 'ಕೀಳರಿಮೆ'ಯಿಂದ ಕಾಣುವುದು, ಹೋದೆಡೆ ಯಲ್ಲೆಲ್ಲಾ ಇಂಗ್ಲೀಷ್ ಬಲ್ಲ ವಿದ್ಯಾರ್ಥಿಗಳಿಗೆ ಸಿಕ್ಕುವ ಪ್ರೋತ್ಸಾಹ, ಪ್ರಾಮುಖ್ಯಗಳನ್ನು ಗಮನಿಸುವ ವಿದ್ಯಾರ್ಥಿಗಳ ಮನಸ್ಸು ತಾನು ಇಂಗ್ಲೀಷ್ ಕಲಿಯಲು ಆಶಿಸುವುದು ಸಹಜವೇ ಆಗಿದೆ. ಇನ್ನು 'ಹಿಂದಿ' ಭಾಷಾ ಮಾಧ್ಯಮದ ಮೂಲಕ ಅಭ್ಯಾಸ ಮಾಡುವ ವರಿಗೆ, ಹಿಂದಿ ಭಾಷೆಯಲ್ಲಿ ಪ್ರಾವೀಣರಾದ ವಿದ್ಯಾರ್ಥಿಗ

ಸರ್ಕಾರವೇ 'ವಿದ್ಯಾರ್ಥಿವೇತನ'ಗಳನ್ನು ನೀಡಿ ಪ್ರೋತ್ಸಾಹಿಸುತ್ತದೆ. ಹೀಗಿರುವಾಗ, ಮಗುವಿನ ಮನಸ್ಸನ್ನು ಕನ್ನಡದ ಕಡೆಗೆ ಸೆಳೆಯಲು ಹೇಗ ತಾನೇ ಸಾಧ್ಯ? ಇಂಥ ನಿರಾಸಕ್ತ ವಿದ್ಯಾರ್ಥಿಗಳ ಮನ ಒಲಿಸಲು, ಯತ್ನಿಸುವ ಕನ್ನಡ ಶಿಕ್ಷಕನ ಬಗೆಗೆ ಆಲೋಚಿಸಿದರೆ ಶಾಲೆಗಳಲ್ಲಿ ಅವನ ಸ್ಥಿತಿಯೂ ಶೋಚನೀಯವೇ ಆಗಿರುತ್ತದೆ. ಪರಿಸ್ಥಿತಿಯ ಶಿಶುವಾದ, ಈ 'ಶಿಕ್ಷಕ' ಶಾಲೆಯ 'ಶಿಕ್ಷಕವೃಂದ'ದವರ ಪಾಲಿಗೆ ಒಂದು 'ಅಸಡ್ಡೆಯ ಪ್ರಾಣಿ'ಯಂತಿದ್ದಾನೆ. ಇವನು ನುರಿತ, ತರಬೇತಿ ಪಡೆದ, ವಿಷಯದ ಬಗೆಗೆ ಪ್ರಭುತ್ವಗಳಿಸಿದವನೇ ಆಗಿದ್ದರೂ, ಅನೇಕ ಸಲ ಇವನನ್ನು ತಮಗಿಂತ ಕಡಿಮೆ ಎಂದು ಭಾವಿಸುವುದೇ ಹೆಚ್ಚು. ಶಾಲೆಯ ಯಾವುದೇ ಕಾರ್ಯಕ್ರಮಗಳಿದ್ದರೂ, ನಾಟಕ, ಸಮೂಹ ಗೀತೆ.... ಹೀಗೆ ಹಲವು ಕಾರ್ಯಗಳ ತಯಾರಿಕೆ ಇವನ ಹೊಣೆಯಾಗುತ್ತದೆ. ಯಾವುದೇ ಶಿಕ್ಷಕರು ಗೈರು ಹಾಜರಿಯಾಗಿದ್ದರೂ, ಅವರ ತರಗತಿಗಳು ಇವನ ಜೋಳಿಗೆಗೆ ಸಿದ್ಧ - ಇನ್ನೂ ವೇಳಾಪಟ್ಟಿಯಲ್ಲಿ ಇವನ ಕಾರ್ಯ ಗೌಣವೆಂಬಂತೆ ಕೊನೆ ಅವಧಿಗಳಿಗೇ ಸೀಮಿತ. ಹೀಗೆ ನಾನಾ ವಿಧದಲ್ಲಿ ಅಲಕ್ಷಕ್ಕೆ ಸಿಲುಕಿದ ಕನ್ನಡ ಶಿಕ್ಷಕ ಎಷ್ಟೇ ಚೆನ್ನಾಗಿ ಬೋಧಿಸಿದರೂ, ಉಳಿದವರು ಅವರ ಕಾರ್ಯದ ಬಗೆಗೆ- "ಅಯ್ಯೋ ಬಿಡಿ ಒಂದು ಕ್ಲಾಸನಲ್ಲಿ ಪ್ರಬಂಧ ಕೊಟ್ಟು, ಇನ್ನೊಂದು ಕ್ಲಾಸಿನಲ್ಲಿ ಪದ್ಯ ಹಾಡಿಸಿದರೆ ಮುಗೀತು ಇವತ್ತಿನ ಕೆಲ್ಸ"- ಎಂಬ ತಾತ್ಸಾರದ ಮಾತು ಇದ್ದದ್ದೇ. ಇಷ್ಟೇ ಅಲ್ಲ, ಕನ್ನಡ ತಾನೇ ಮಾತಾಡಲು ಬಲ್ಲ ಯಾರು ಬೇಕಾದರೂ ಪಾಠವನ್ನು ಮಾಡಬಲ್ಲವೆಂಬ ಧೈರ್ಯ ; ಎಷ್ಟೋ ಸಲ ಕನ್ನಡ ಶಿಕ್ಷಕನ ಕೊರತೆ ಇದ್ದಲ್ಲಿ, ಆಡಳಿತ ವರ್ಗ ಬೇರೆ ವಿಷಯ ಬೋಧಿಸುವ ಶಿಕ್ಷಕರನ್ನೇ ಕನ್ನಡವನ್ನು ತೆಗೆದುಕೊಳ್ಳಲು ಒಪ್ಪಿಸುತ್ತದೆ. ಎಲ್ಲ ಶಿಕ್ಷಕರಿಗೂ ತಮ್ಮ ತಮ್ಮ ಪಾಲಿನ ಕೆಲಸವೇ ಸಾಕೆನಿಸಿದಾಗ, ತನಗೆ ಅಭಿಮಾನದಿಂದ ಇನ್ನೊಂದು ಭಾಷೆಯನ್ನು ಹೇಗೆ ತಾನೇ ಶ್ರದ್ಧೆಯಿಂದ ಕಲಿಸ ಬಲ್ಲ? ಹೀಗಾದಾಗ. ಶಿಕ್ಷಕನ ನಿಲರ್ಕ್ಷ್ಯ ಮನೋಭಾವದ ಪರಿಣಾಮವಾಗಿ ವಿದ್ಯಾರ್ಥಿಗಳಿಗೂ ಕನ್ನಡ ತಾನೇ ಓದಿದರಾಯ್ತು ಎಂಬ ಅಲಕ್ಷ್ಯ ಭಾವನೆ ಉಂಟಾಗುತ್ತದೆ. ಹೀಗೆ ಶಾಲೆಯಲ್ಲೂ ಕನ್ನಡದ ಬಗೆಗೆ ಅನಾದರ ಉಂಟಾಗುವ, ಸನ್ನಿವೇಶಗಳು ಉಂಟಾಗುತ್ತಿವೆ. ಇತ್ತೀಚಿಗೆ ಅನೇಕ ಶಾಲೆಗಳಲ್ಲಿ, ಸಂಸ್ಕೃತದ ಉಪಾಧ್ಯಾಯರಿಗೆ ಅಗತ್ಯವಾದಷ್ಟು ಪೂರ್ಣ ಅವಧಿಗಳು ಸಾಲದಾದರೇ, ಅವರಿಗೆ ಕನ್ನಡ ತರಗತಿಗಳನ್ನು ಹೊಂದಿಸುತ್ತಿದ್ದಾರೆ. ಇದರಿಂದ ಸಂಸ್ಕೃತ ಪಂಡಿತರುಗಳು ಸಂಸ್ಕೃತದಂತೆ ಕನ್ನಡ ಪಾಠವನ್ನು ತಾವೇ ಒಮ್ಮೆ ಓದಿ, ಕಥೆ ಹೇಳಿ, ಪ್ರಶ್ನೋತ್ತರ ಗುರುತು ಮಾಡಿಸಿದರೆ ತಮ್ಮ ಪಾಲಿನ ಕೆಲಸ ಮುಗಿದಂತೆ ಎಂದೇ ಭಾವಿಸುತ್ತಾರೆ. ಹೀಗೆ ಅವರು 8-9 ನೇ ತರಗತಿಗಳನ್ನು ಸಿದ್ಧಪಡಿಸಿದ ಮಕ್ಕಳು 10ನೇ ತರಗತಿಗೆ ಬಂದಾಗ, ಕನ್ನಡ ಪಠ್ಯಕ್ರಮದ ಹೊರೆ ಕಂಡು ಅವರು ಹೆದರುವಂತಾದೀತು. ಹೇಗೂ ಅಂತೂ ಓದಿ ಬರೆದ ಆ ಮಕ್ಕಳಿಗೆ ಬರುವ ಮತ್ತೊಂದು ಆರೋಪವೆಂದರೆ- "ಕನ್ನಡದಲ್ಲಿ ಹೆಚ್ಚು ನಂಬರ್ ಕೊಡಲ್ಲಾ"- ಎಂಬುದು; ಆದರೆ ಅವರ ಅಶುದ್ಧ ಭಾಷೆ, ವಿರೂಪಗೊಂಡ ಅಕ್ಷರಗಳು, ಬರೆದ ವಿಷಯವೂ ಅಸ್ಪಷ್ಟವಾಗಿದ್ದರೆ ಹೆಚ್ಚು ಅಂಕಗಳಿಕೆ ಹೇಗೆ ತಾನೇ ಸಾಧ್ಯವಾದೀತು?

ಶಾಲೆಯಲ್ಲಿ ಸುಮಾರು ಒಂಬತ್ತು ವರ್ಷಗಳು ತಾಕಲಾಡಿ ಪ್ರಾಥಮಿಕ ಶಿಕ್ಷಣ ಮುಗಿಸಿದ ಮಕ್ಕಳು ಪ್ರೌಢಶಾಲೆಗೆ ಬಂದಾಗ ಮತ್ತೆ 'ಭಾಷೆ ಸಮಸ್ಯೆ' ಅವರೆದುರು ಸುಳಿಯುತ್ತದೆ. ಪುನಃ ಪೋಷಕರ ಪ್ರತಿಷ್ಠೆ ಇಲ್ಲಿ ತಲೆ ಹಾಕಿ ಅವರು ಮಕ್ಕಳಿಗೆ ಮುಂದಿನ ವಿದ್ಯಾಭ್ಯಾಸಕ್ಕೆ ಅನುವಾಗುವುದೆಂದು ಇಂಗ್ಲೀಷ್ ಮಾಧ್ಯಮ ಕೊಡಿಸುತ್ತಾರೆ. ಇದರಂತೆ ಹೆಚ್ಚು ಅಂಕಗಳಿಸಲು ಸಾಧ್ಯವೆಂದು ಭಾವಿಸಿ ಪ್ರಥಮ ಭಾಷೆಯಾಗಿ ಸಂಸ್ಕೃತ, ದ್ವಿತೀಯ ಭಾಷೆಯಾಗಿ ಇಂಗ್ಲೀಷ್, ತೃತೀಯ ಭಾಷೆಯಾಗಿ ಕನ್ನಡವನ್ನು ಆರಿಸುತ್ತಾರೆ. ಇದರಿಂದ ಇಂದಿನ ವಿದ್ಯಾಭ್ಯಾಸದ ಗುರಿ ರ್‍ಯಾಂಕ್, ಮತ್ತು ಅಂಕಗಳಿಕೆಯೇ ಹೊರತು, ಮಗುವಿಗೆ ಅತ್ಯಗತ್ಯವಾಗಿದ್ದ ಭಾಷಾಜ್ಞಾನವಲ್ಲ ಎಂಬುದು ಸ್ಪಷ್ಟವಾಗುತ್ತಿದೆ. ಇಲ್ಲಿ ಇನ್ನೊಂದು ಅಂಶ ಗಮನಾರ್ಹವಾದುದ್ದು. ಅದೆಂದರೆ ಸಂಸ್ಕೃತದ ವಿದ್ಯಾರ್ಥಿಯು ಸಂಸ್ಕೃತ ಭಾಷೆಯಲ್ಲೂ ಪರಿಣತಿಗಳಿಸಿರದೇ, ಶೇ. 50ರಷ್ಟನ್ನು (ಕನ್ನಡ) ಇಂಗ್ಲೀಷ್ ಭಾಷೆಯಲ್ಲೇ ಉತ್ತರಿಸುತ್ತಾನೆ. ಸರ್ಕಾರವೇನೊ ಕಡ್ಡಾಯವಾಗಿ ಕನ್ನಡ ಕಲಿಸುತ್ತೇವೆಂದು ಭಾವಿಸಿ ತೃತೀಯ ಭಾಷೆ ಕನ್ನಡವನ್ನು ಕಡ್ಡಾಯಗೊಳಿಸಿದೆ ಆದರೆ ಇದೂ ತೂತು ಪಾತ್ರೆ ಎಂಬುದು ನೆನಪಿರಬೇಕು. ಕಾರಣ ತೃತೀಯ ಭಾಷೆ ಹಿಂದಿ ಪುಸ್ತಕವು, ಎಲ್ಲರಿಗೂ ಒಂದೇ ಪಠ್ಯವಾಗಿದ್ದು, ಅದನ್ನು ಓದಲು, ಪ್ರಶ್ನೆಗಳಿಗೆ

ಉತ್ತರಿಸಲು ಕಿಂಚಿತ್ತಾದರೂ ಜ್ಞಾನವಿರುವಂತಿದೆ ಆದರೆ ತೃತೀಯ ಭಾಷೆ ಕನ್ನಡ ಪುಸ್ತಕಗಳು ವಿಶೇಷ ರೀತಿಯವು. ಇದರಲ್ಲಿ ಕಲಿತವರಿಗಾಗಿ, ಮತ್ತು ಕಲಿಯದವರಿಗಾಗಿ ಎಂದು ಎರಡು ಭಾಗಗಳಿವೆ. 7ನೇ ತರಗತಿ ಮುಗಿಸಿದ್ದ ಎಲ್ಲಾ ವಿದ್ಯಾರ್ಥಿಗಳೂ ಹಿಂದಿ ಕಲಿತವರೇ ಆಗಿರುತ್ತಾರೆ. ಆದರೆ ಇವರು ಕನ್ನಡ ಕಲಿಯದವರು. ಇಂಥ ವಿದ್ಯಾರ್ಥಿಗಳನ್ನು ಶಾಲೆಗೆ ಸೇರಿಸುವಾಗ, ಇಂಗ್ಲೀಷ್ ಮಾಧ್ಯಮಕ್ಕಾಗಿ ಅನೇಕ ವೇಳೆ ಪೋಷಕರೇ ತಮ್ಮ ಮಾತೃ ಭಾಷೆ ತಮಿಳು, ತೆಲುಗು ಎಂದು ತಪ್ಪು ಬರೆದುಕೊಟ್ಟು ಸೇರಿಸಿರುತ್ತಾರೆ. ಈ ತೃತೀಯ ಭಾಷೆ ಕನ್ನಡವನ್ನು ಕಲಿಸುವ ಶಿಕ್ಷಕರು ಮೊದಲೇ ಸೂಚಿಸಿರುವಂತೆ ಶಾಲೆಯಲ್ಲಿರುವ ಇತರ ವಿಷಯ ಬೋಧಕರು. ಹೀಗಿರುವಾಗ ವಿದ್ಯಾರ್ಥಿ ತಾನು ಕಲಿತವನೆಂದು ಒಪ್ಪಿಕೊಂಡು ಹೆಚ್ಚು ಶ್ರಮ ಪಡಲು ಸಿದ್ಧನಾಗುವುದು ಹೇಗೆ ? ಕಲಿಯದಿರುವವರಿಗಾಗಿ ಕನ್ನಡ ಬೋಧನೆಯು ಸುಲಭ, ಮಕ್ಕಳಿಗೂ, ಆಟ, ಅಂದಮೇಲೆ 7ನೇ ತರಗತಿಯಲ್ಲಿ 100, 150 ಅಂಕಗಳ ಕನ್ನಡ ಪತ್ರಿಕೆಗೆ ಉತ್ತರಿಸಿ ಹೆಚ್ಚು ಅಂಕ ಗಳಿಸಿದ್ದ ಬುದ್ಧಿವಂತ ವಿದ್ಯಾರ್ಥಿಯೂ ಈ ಮಟ್ಟಿಗೆ "ಕನ್ನಡ ಕಲಿಯದ ವಿದ್ಯಾರ್ಥಿ". ನಿಜವಾಗಿ ಪ್ರತಿಭಾನ್ವಿತ ವಿದ್ಯಾರ್ಥಿಗಳಲ್ಲಿ ಹೆಚ್ಚಿನವರು ರ್‍ಯಾಂಕಿನ ಆಸೆಯಿಂದ ಸಂಸ್ಕೃತ ಪ್ರಥಮ ಭಾಷೆಯಾಗಿ ಆರಿಸುತ್ತಿರುವುದು ತಮ್ಮಲ್ಲಿದ್ದ ಕನ್ನಡತನಕ್ಕೆ ಕೊಟ್ಟಿರುವ ಕೊಡಲಿಪೆಟ್ಟೆಂದೇ ಭಾವಿಸಬಹುದಾಗಿದೆ. ಈ ವೈಪರೀತ್ಯವನ್ನು ನೋಡಿ ನಗಬೇಕೋ, ಅಳಬೇಕೋ ತಿಳಿಯದಾಗಿದೆ ! ಇದರಿಂದ ವಿದ್ಯಾರ್ಥಿಗೆ 150 ಅಂಕಗಳ ಸಂಸ್ಕೃತ ಮತ್ತು 50 ಅಂಕಗಳ ತೃತೀಯ ಭಾಷೆ ಕನ್ನಡ ಒಟ್ಟು 200 ಅಂಕಗಳ ಸಿದ್ಧತೆ ಸುಲಭವಾಯಿತು. ಉಳಿದ ವಿಷಯಗಳ ಕಡೆ ಅವನ ಮನ ತಿರುಗಲು ಅವಕಾಶವಾಯಿತು. ಮೂರನೇ ಒಂದು ಭಾಗ ಓದುವಷ್ಟಿಲ್ಲ ಎಂದರೆ ಯಾರು ಬಿಟ್ಟಾರು? ಹೀಗಾದಾಗ ರ್‍ಯಾಂಕುಗಳು ಅವರಿಗೆ ಕಟ್ಟಿಟ್ಟ ಬುತ್ತಿಯಲ್ಲವೇ? ಇಷ್ಟೆಲ್ಲಾ ತಿಳಿದೂ ತಿಳಿದೂ ಒಳ್ಳೆಯ ಬುದ್ಧಿವಂತ ಮಕ್ಕಳು ಕನ್ನಡ ಭಾಷೆಯನ್ನು ಪ್ರಥಮ ಭಾಷೆಯಾಗಿ ಆರಿಸಲು ಹೇಗೆ ಮುಂದೆ ಬಂದಾರು? ಹಾಗೆ ಮಾಡಲು ಅವರೇನು ಮೂರ್ಖರೇ ?

ಹಾಗಾದರೆ ಕನ್ನಡದ ವಿದ್ಯಾರ್ಥಿಗಳು ಯಾರು ? ಎಂಬ ಪ್ರಶ್ನೆ ಬಂದಾಗ, ಕನ್ನಡ ಶಿಕ್ಷಕನ ಸ್ಥಿತಿ ಶೋಚನೀಯವಾದುದೇಕೆ ? ಎಂಬುದು ಸ್ಪಷ್ಟವಾಗುತ್ತದೆ. ನಮ್ಮ ದೇಶದಲ್ಲಿ 7ನೇ ತರಗತಿವರೆಗೆ ಕಡ್ಡಾಯ ಶಿಕ್ಷಣ ಸೌಲಭ್ಯವಿದ್ದು, 7ನೇ ತರಗತಿಯಿಂದ ಕಡ್ಡಾಯವಾಗಿ ಮಾಡಲ್ಪಟ್ಟ 3ನೇ ದರ್ಜೆಯ ಮಕ್ಕಳೇ-ಇಂದಿನ ಕನ್ನಡದ ವಿದ್ಯಾರ್ಥಿಗಳು. ಇವರು ಸಾಮಾನ್ಯರಾದುದರಿಂದ ಇವರಿಗೆ ಸಂಸ್ಕೃತ ಕಲಿಕೆ ಕಷ್ಟ. ಆದರೆ ಕನ್ನಡದ ಬಗೆಗೆ ಮಾತ್ರವಲ್ಲ ಇವರಿಗೆ ಯಾವ ವಿಷಯದ ಬಗೆಗೂ ಶ್ರದ್ಧೆ ಆಸಕ್ತಿ ಇರುವುದಿಲ್ಲ. ಇಂದಿನ ಸಮಾಜದಲ್ಲಿ ವ್ಯಾಪಕವಾಗಿ ಹರಡಿರುವ ಸಿನಿಮಾ, ಸ್ಟ್ರೈಕ್‌ಗಳು, ಟಿ.ವಿ.ಗಳ ಮೋಜಿನಿಂದ ದಿನ ಕಳೆಯಲಾಶಿಸುವ, ತಮ್ಮ ಪೋಷಕರ ಗಮನದಿಂದ ದೂರವಾಗಿ ಬೆಳೆಯುತ್ತಿರುವ ವಿದ್ಯಾರ್ಥಿವೃಂದ. ಈ ವಿದ್ಯಾರ್ಥಿಗಳೇ ಇಂದು ಕನ್ನಡವನ್ನು ಉಳಿಸಬೇಕಾಗಿರುವ, ಬೆಳಸಬೇಕಾಗಿರುವ ಭಾವೀ ಪ್ರಜೆಗಳು. ಇಂಥವರ ಪಾಲಿಗೆ ಸಂಸ್ಕೃತ ಇತರ ಪಠ್ಯಕ್ರಮಗಳೊಂದಿಗೆ ಹೋಲಿಸಿ ನೋಡಿದಾಗ ಕನ್ನಡದ ಪಠ್ಯಕ್ರಮವು ಒಂದು 'ಹಿರಿ ಹೊರೆಯೇ' ಆಗಿದೆ. 7ನೇ ತರಗತಿಯವರೆಗೆ ಇವರು ಕನ್ನಡ ತರಗತಿಗಳಲ್ಲಿ ಹಾಜರಿರುತ್ತಾರಾದರೂ, ಇವರಿಗೆ ಸರಿಯಾಗಿ ಅಕ್ಷರದ ವಿನ್ಯಾಸದ ಕಲ್ಪನೆಯಾಗಲೀ, ಕಾಗುಣಿತದ ಅಭ್ಯಾಸವಾಗಲೀ ಆಗಿರುವುದಿಲ್ಲ. ಇನ್ನು ಉಚ್ಚಾರಣೆಯಂತೂ ಆ ದೇವರಿಗೇ ಪ್ರೀತಿ. ಇಷ್ಟಾಗಿ ಅವರ ಮಟ್ಟಿಗೆ ಕೇಳಿದರೆ-ಕನ್ನಡ ತಾನೇ, ಎಲ್ಲಾ ಗೊತ್ತು ಎಂಬ ಉಪೇಕ್ಷೆ. ಹೀಗಿರುವ ಮಕ್ಕಳಲ್ಲಿ ಭಾಷಾಭಿಮಾನ ಮೂಡಿಸಲು ಯತ್ನಿಸುವುದೆಂದರೆ 'ಕರೀ ನಾಯಿ ತೊಳೆದು ಬಿಳಿನಾಯಿ ಮಾಡಲು ಯತ್ನಿಸಿದಂತೆ' ಹಾಸ್ಯಕ್ಕೆಡೆಯಾಗಿದೆ. ಏನಾದರೂ, ಇವರನ್ನು ತಿದ್ದಲು ಪ್ರಯತ್ನಿಸಿ ಪೋಷಕರೊಂದಿಗೆ ಸಹಾಯ ಕೇಳಿದರೋ ಮುಗಿಯಿತು ಅವನ ಕಥೆ. ಒಂದೇ ಸಮನೆ ಎಗರಿ ಬೀಳುತ್ತಾ ಅವರು "ಏನು ಕನ್ನಡದಲ್ಲಿ ನನ್ಮಗ ಫೇಲಾಗ್ತಾನ್ಯೇ? ಅಷ್ಟು ಪೆದ್ದನೇ ! ಎಷ್ಟೊಂದು ಓದಿದ್ದ, ಬರ್ದ್ದ ಇದ್ದನಂತೆ. ಆ ಮೇಷ್ಟ್ರೇ ಫೇಲ್ಮಾಡಿಸಿದ್ದಾರೆ" ಎಂಬ ದೂರನ್ನು ಹಣೆಗೆ ಕಟ್ಟುತ್ತಾರೆ. ಅಷ್ಟೇ ಅಲ್ಲ "ನಾವೇನ್ಮಾಡೋಣ- ಈಗಾಗ್ಲೇ ಮನೆಪಾಠಕ್ಕೂ ಹಾಕಿದೀವಿ" ಎಂಬ ಠೀವಿ ಬೇರೆ. ಗೃಹಪಾಠವಿರುವುದು ಉಳಿದ ವಿಷಯಗಳಿಗಾಗಿ. ಅಲ್ಲಿ ಅವರೂ ಹೆಚ್ಚಿನ ಗಮನ ಕೊಡುವುದೂ ಆ ವಿಷಯಗಳಿಗೆ ಹೆಚ್ಚು ಎಂಬುದು ಇವರ ಗಮನಕ್ಕೆ ಬಾರದ ವಿಷಯ ; ಇದರಂತೆ ವಿದ್ಯಾರ್ಥಿಗಳಿಗೂ ಬೇರೆ ವಿಷಯಗಳಲ್ಲಿ ಹೆಚ್ಚು

ಅಂಕಗಳಿಗೆ ಸುಧಾರಿಸಿದರೆ ಸಾಕು ಎಂಬ ಮನೋಭಾವ ವಿದೆ. ಹೀಗಾಗಿ ಏಕಮುಖವಾಗಿ ಸಾಗುತ್ತಿರುವ ಕನ್ನಡ ಪ್ರಗತಿಯ ಪ್ರಯತ್ನ ಅರ್ಥಶೂನ್ಯವಾಗಿದೆ.

ಇಂಥ ಪರಿಸರದಲ್ಲಿ ನಿಂತ ಕನ್ನಡ ಶಿಕ್ಷಕ ಒಂದು ವೇಳೆ ಕನ್ನಡಾಭಿಮಾನಿಯಾಗಿದ್ದು, ಮಕ್ಕಳಲ್ಲಿ ಕನ್ನಡ ಭಾಷೆಯನ್ನು ಬೆಳೆಸಲು ಯತ್ನಿಸಿದರೆ ಮೊದಲು, ಅವನು ಪಠ್ಯಕ್ಕಿಂತ, ಭಾಷಾಜ್ಞಾನ ಬರುವಂತೆ ಕಾರ್ಯ ರೂಪಿಸಿ ಕೊಳ್ಳಬೇಕಾದೀತು. ಪ್ರತಿದಿನ, ಪ್ರತಿವಿದ್ಯಾರ್ಥಿಗೂ ಸಾಧ್ಯವಾಗುವಂತೆ ಉಚ್ಚಾರ, ಶುದ್ಧಭಾಷಾಪ್ರಯೋಗ, ಸ್ವಅಭಿವ್ಯಕ್ತಿಗೆ ಅವಕಾಶ ಒದಗಿಸಬೇಕು. ಆದರೆ ಹೀಗೆ ತನ್ನದೇ ರೀತಿಯಿಂದ ತರಗತಿಯನ್ನು ನಡೆಸಲು ಶಿಕ್ಷಕ ಪೂರ್ಣಸ್ವತಂತ್ರನಲ್ಲ. ಇಲಾಖೆಯವರು ನಿಗದಿ ಪಡಿಸಿದ ಪಠ್ಯಕ್ರಮದ ಹೊರೆಯು ಅವನನ್ನು ಎಚ್ಚರಿಸುತ್ತಿರುತ್ತದೆ. 'ಪರೀಕ್ಷೆ' ಅವನ ಬೋಧನಾಸಾಮರ್ಥ್ಯದ ಪರೀಕ್ಷೆಯೂ ಹೌದು ! ಇಷ್ಟೆಲ್ಲಾ ತೊಂದರೆಗಳಿದ್ದರೂ, ಕನ್ನಡ ಶಿಕ್ಷಕ ಸಮರ್ಪಕವಾಗಿ ತನ್ನ ಕೆಲಸ ನಿರ್ವಹಿಸಿದರೆ, ಅವನ ಕಾರ್ಯ ಉಳಿದ ವಿಷಯಬೋಧಕರ ಕಾರ್ಯಕ್ಕಿಂತ ಪ್ರಮುಖವಾಗಿ ಪರಿಣಮಿಸುತ್ತದೆ. ಏಕೆಂದರೆ, ಇಂದಿನ ಶಿಕ್ಷಣ ಕೇವಲ ವ್ಯಾವಹಾರಿಕ ಜ್ಞಾನದಾಯಿಯಾಗಿದ್ದು ಯಾಂತ್ರಿಕ ಜೀವನಕ್ಕೆ ಅನುವಾಗಿದೆ. ಮನುಷ್ಯರಲ್ಲಿ ಮಾನವೀಯ ಸದ್ಗುಣಗಳು ದೂರವಾಗುತ್ತಿದ್ದು ಸಮಾಜದಲ್ಲಿ ಸ್ವಾರ್ಥ ವಂಚನೆ ಲೋಭಗಳು ಎಲ್ಲೆಡೆ ತಾಂಡವವಾಡುತ್ತಿವೆ. ಹೀಗೆ ಕಲುಷಿತವಾಗಿರುವ ಸಮಾಜವನ್ನು ಸುಧಾರಿಸಲು ಮಾನವೀಯತೆಯನ್ನು ಬಿತ್ತಿ ಬೆಳೆಸಬೇಕಾಗಿದ್ದು ಈ ಕಾರ್ಯವನ್ನು ಸಾಹಿತ್ಯದ ಮೂಲಕವೇ ಸಾಧಿಸುವಂಥಾದ್ದಾಗಿದೆ. ಎಳೆಯ ಮಕ್ಕಳ ಮುಗ್ಧ ಮನಸ್ಸಿನ ಮೇಲೆ ಕಥೆ ಕವನಗಳ ಮೂಲಕ, ಅವರಿಗೆ ಮನಮುಟ್ಟುವಂತೆ, ಮಾತೃಭಾಷೆಯ ಮೂಲಕ ಭಾಷಾಬೋಧನೆಯನ್ನು ಸಾಗಿಸಿದರೆ ಖಂಡಿತವಾಗಿ ಆ ಮಕ್ಕಳಲ್ಲಿ ಸ್ನೇಹ, ವಿಶ್ವಾಸ, ಕರುಣೆ, ದಯೆ, ಪರೋಪಕಾರ ಮೊದಲಾದ ಭಾವನೆಗಳನ್ನು ಬಿತ್ತಬಹುದು. ಆದರೆ ಈ ಕಾರ್ಯವೆಸಗಲು, ಭಾಷಾಭಿಮಾನಿ ಕಾರ್ಯಾಸಕ್ತರಾದ, ಉತ್ತಮ ಕನ್ನಡ ಶಿಕ್ಷಕರ ಅಗತ್ಯವಿದೆ.

ಹೀಗೆ ಸಮಾಜದ, ಶಾಲೆಯ ವೃಂದದವರ ಅಲಕ್ಷ್ಯಕ್ಕೆ ಗುರಿಯಾದ ಕನ್ನಡ ಶಿಕ್ಷಕನಿಗೆ ತರಗತಿಯ ವಿದ್ಯಾರ್ಥಿಗಳಿಂದಲೇ ತೃಪ್ತಿ, ನೆಮ್ಮದಿ ಸಾಧ್ಯ. ಕಾರಣ ಅವನು ಮಕ್ಕಳ ಒಡನಾಡಿ ಶಿಕ್ಷಕ 'ಸ್ನೇಹಮಯಿ' ಯಾಗಿದ್ದರಂತೂ ಅವನು ಮಕ್ಕಳ ಪಾಲಿಗೆ ಮನೆಯ ತಂದೆ ತಾಯಿಯ ಸ್ಥಾನವನ್ನೇ ತುಂಬಬಲ್ಲ ವ್ಯಕ್ತಿಯಾಗುತ್ತಾನೆ. ಮಕ್ಕಳು ಅವನ ಹತ್ತಿರ ಮನಬಿಚ್ಚಿ ಮಾತನಾಡಬಲ್ಲರು, ತಮಗೆ ತಿಳಿಯದ್ದನ್ನು ಕೇಳಿ ತಿಳಿಯಬಲ್ಲರು. ಭಾಷೆ ಸುಲಭವಾದ ಮಾಧ್ಯಮವಾಗಿದ್ದು, ಶಿಕ್ಷಕ ವಿದ್ಯಾರ್ಥಿಗಳ ನಡುವೆ ನೇರ ಸಂಪರ್ಕವೊದಗಿಸಿ ಅವನು ತಿಳಿಸಿದ್ದನ್ನು ಸುಲಭವಾಗಿ ಗ್ರಹಿಸುತ್ತಾರೆ. ಇದರಿಂದ ಮಕ್ಕಳಿಗೂ ಆನಂದವಾಗಿ ಅವನೊಂದಿಗೆ ಸಲಿಗೆ ಸಾಧ್ಯವಾಗುತ್ತದೆ. ಹೀಗೆ ಶಿಕ್ಷಕ-ವಿದ್ಯಾರ್ಥಿ ಇಬ್ಬರಿಗೂ ಸಾಹಿತ್ಯದ ಸರಸತೆ ಸಂತೋಷವನ್ನುಂಟು ಮಾಡಬಲ್ಲದು. ಕನ್ನಡ ಶಿಕ್ಷಕನು ಸದ್ಗುಣವಂತನಾಗಿದ್ದಲ್ಲಿ ಮಕ್ಕಳ ಆದರ್ಶವ್ಯಕ್ತಿಯೂ ಆದಾನು. ತನ್ಮೂಲಕ ಮಕ್ಕಳಲ್ಲೂ ಸದ್ಗುಣಗಳ ಪ್ರೇರೇಪಣೆ ಸಾಧ್ಯವಾದೀತು.

ಹೀಗಿರುವಲ್ಲಿ ಶಿಕ್ಷಣ ಇಲಾಖೆಯವರು ಸ್ವಲ್ಪ ಸಹಕರಿಸಿ ಶಾಲೆಗಳಲ್ಲಿ ಕನ್ನಡ ಶಿಕ್ಷಕನನ್ನು ಆರಿಸುವಾಗ "ಜ್ಞಾನವುಳ್ಳ, ಭಾಷಾಭಿಮಾನವುಳ್ಳ ಕಾರ್ಯಾಸಕ್ತ"ರನ್ನು ಮಾತ್ರ ನೇಮಕ ಮಾಡಿ ಸಹಕರಿಸಿದರೆ, ಬಹುಶಃ ಕನ್ನಡದ ಪ್ರಗತಿಗೆ ಅಡಿಗಲ್ಲು ಹಾಕಿದಂತಾಗುತ್ತದೆ. ಬದಲಾಗಿ ಮೊದಲು ಎಲ್ಲೆಡೆ ಕನ್ನಡ ಅಗ್ರಸ್ಥಾನವಿದ್ದುದನ್ನು ತೆಗೆದು ಇಂದು ತೃತೀಯ ಸ್ಥಾನ ಕೆಲವೊಮ್ಮೆ ಅಂತ್ಯಸ್ಥಾನವನ್ನು (ಇಂದಿನ ಪರೀಕ್ಷೆಗಳನ್ನು ನಡೆಸುವಲ್ಲಿ ಮಾಡಿರುವ) ನೀಡುತ್ತಿರುವುದನ್ನು ಬಿಟ್ಟು ಯಥೋಚಿತವಾಗಿ ಸಹಕರಿಸಿದರೆ ಮಾತ್ರ ಕನ್ನಡ ಪ್ರಗತಿ ಸಾಧ್ಯವಾದೀತು.

ಕೆಳಹಂತದಿಂದ ಕನ್ನಡ ಭಾಷೆಯನ್ನು ಅಲಕ್ಷಿಸಿರುವುದೇ ಮುಂದಿನ ತರಗತಿಗಳಲ್ಲಿ, ಅದರಲ್ಲೂ ಪಿ.ಯು.ಸಿ. ವಿಜ್ಞಾನ ವಿಭಾಗದಲ್ಲಿ ಕನ್ನಡ ಮಾಧ್ಯಮ ಅಸಾಧ್ಯವೆಂದು ಬಗೆಯಲು ಕಾರಣವಾಗಿದೆ. ಬದಲಾಗಿ, ಕೆಳಹಂತದಲ್ಲೇ ರಾಜ್ಯಭಾಷೆ ಕನ್ನಡಕ್ಕೆ ಉಚಿತಸ್ಥಾನವನ್ನು ನೀಡಿ, ಕನ್ನಡ ಬೋಧನೆಯ ಮೂಲಕ ಭಾಷಾಜ್ಞಾನವನ್ನು ಬಲಪಡಿಸಿದರೆ ಮುಂದಿನ ಹಂತಗಳಲ್ಲಿ ಕನ್ನಡ ತಾನೇ ತಾನಾಗಿ ವಿರಾಜಿಸುತ್ತದೆ. ಸುಮಾರು 15-20 ವರ್ಷಗಳಿಂದೀಚೆಗೆ ಕನ್ನಡಭಾಷೆಯ ಸ್ಥಾನಮಾನ ಕುಗ್ಗಿದ್ದು ಇಂಗ್ಲೀಷ್ ಮಾಧ್ಯಮದ ಬಳಕೆ ಅತಿಯಾಗುತ್ತಿದೆ. ಅದಕ್ಕೆ ಮೊದಲಿದ್ದ ಪ್ರತಿಭಾನ್ವಿತರೆಲ್ಲ ಕನ್ನಡಭಾಷಾ ಮಾಧ್ಯಮದಿಂದಲೇ ಮುಂದೆ ಬಂದವರೆಂಬುದು ನೆನಪಿರಬೇಕಾದ ವಿಷಯವಾಗಿದೆ. ಬ್ರಿಟಿಷರು ಆಳುತ್ತಿದ್ದ

ಕಾಲದಲ್ಲೂ ರಾಜ್ಯಭಾಷೆಯಾಗಿದ್ದ ಕನ್ನಡ-ಆಡಳಿತ ಭಾಷೆಯಾಗಿ ಮೆರೆದಿದ್ದು, ಹಲವು ಬ್ರಿಟಿಷ್ ಅಧಿಕಾರಿಗಳನ್ನು ವಿದ್ವಾಂಸರನ್ನು ತನ್ನೆಡೆಗೆ ಆಕರ್ಷಿಸಿ ಮೆರೆದ ಭಾಷೆ-ಇಂದು ಕನ್ನಡಿಗರ ಕೈಯಿಂದಲೇ ಜಾರಿ ಹೋಗುತ್ತಿದೆ.

ಹೀಗಾಗದಂತೆ ಎಚ್ಚರವಹಿಸಬೇಕಾದರೆ "ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು" ಎಂಬುದನ್ನರಿತು, ಅವರಿಗೆ ಕನ್ನಡ ಭಾಷಾಜ್ಞಾನವನ್ನು ನೀಡಬೇಕಾದದ್ದು ಕನ್ನಡಿಗರ ಕರ್ತವ್ಯವಾಗಿದೆ. ಕೇವಲ ಭಾಷೆಯನ್ನು, ಪರೀಕ್ಷೆಗಾಗಿ ಬೋಧಿಸದೇ ಕನ್ನಡ ಶಿಕ್ಷಕನಾದವನು ತಾನು ಕಲಿಸುವ ಸಾಹಿತ್ಯಕ ಅಂಶಗಳ ಮೂಲಕ ಮಗುವಿನಲ್ಲಿ ಸದ್ಗುಣಗಳನ್ನು ಪ್ರೇರೇಪಿಸುತ್ತಾ ಜಗತ್ತಿನಲ್ಲಿ ಬದುಕುವ ರೀತಿ ನೀತಿಗಳನ್ನು ಪರಿಚಯಿಸಬೇಕು. ಈ ಮೂಲಕ ತಾನು ಕಲಿಯುವ ಮಿಕ್ಕೆಲ್ಲಾ ವಿಷಯಗಳಿಗಿಂತ ಭಾಷಾಜ್ಞಾನ ಮತ್ತು ಸಾಹಿತ್ಯ ಜ್ಞಾನ ಬದುಕನ್ನು ತಿದ್ದುವುದೆಂಬ ಅರಿವು ತನ್ನ ಭವ್ಯ ವ್ಯಕ್ತಿತ್ವ ನಿರ್ಮಾಣಕ್ಕೆ ಅಗತ್ಯವೆಂಬ ಜ್ಞಾನ ಮಗುವಿಗೆ ಬಂದರೆ ಭಾಷಾಬೋಧನೆ ಸಾರ್ಥಕವಾದೀತು !

---

ಕನ್ನಡಿಗರಾದ ನಾವು ಸುಸಂಘಟಿತರಾಗಬೇಕು. ನಮ್ಮ ನಾಡು-ನುಡಿಯ ಸೇವೆ ಸಲ್ಲಿಸಲು ಮುಂದುವರಿಯುವಾಗ ಹಿಂದೂ, ಮುಸಲ್ಮಾನ, ಬ್ರಾಹ್ಮಣ ಬ್ರಾಹ್ಮಣೇತರ ಎಂಬ ಸಂಕುಚಿತಾಭಿಪ್ರಾಯಗಳನ್ನು ಬದಿಗೊತ್ತಿ ನಮ್ಮ ಕುಲ, ಗೋತ್ರ-ಸೂತ್ರಗಳೆಲ್ಲವೂ ಕನ್ನಡವೇ, ನಮಗೆ 'ಕನ್ನಡ ಗೆಲ್ಗೆ'-'ಕನ್ನಡ-ಬಾಳ್ಗೆ' ಎಂಬುದೇ ನಿತ್ಯವೂ ಪಠಿಸುವ ಪಂಚಾಕ್ಷರಿ ಮಹಾಮಂತ್ರವೆಂದು ಭಾವಿಸಬೇಕು. ಪ್ರತಿಯೊಬ್ಬ ಕನ್ನಡಿಗನೂ ಕನ್ನಡಮ್ಮನ ಪೂಜಾರಿಯಾಗಬೇಕು. ಆಕೆಯ ಆಶೀರ್ವಾದ ಹೊಂದಿ ಭಾರತಾಂಬೆಯ ಪೂಜೆಗೆ ಮುಂದಡಿಯಿಡಬೇಕು.

**ಬಿ. ಎಂ. ಶ್ರೀ.**



# ಕಚೇರಿಗಳಲ್ಲಿ ಕನ್ನಡ

— ಒಂದು ಅನಿಸಿಕೆ

ಕೂ. ಸ. ಅಪರ್ಣ

ಭಾಷೆಯು ಭಾವನೆಗಳ ಅಭಿವ್ಯಕ್ತಿಗೆ ಒಂದು ಮಾಧ್ಯಮ, ಅಂತೆಯೇ ಮನುಷ್ಯನ ಎಲ್ಲ ರೀತಿಯ ವ್ಯವಹಾರಗಳಿಗೆ ಸುಗಮ ದಾರಿ. ನಮಗೆ ಅರ್ಥವಾಗದ ವಿಭಿನ್ನ ಭಾಷಾ ಪರಿಸರಕ್ಕೆ ಹೋದಾಗ ನಮಗೆ ಭಾಷೆಯ ಮಹತ್ವ ಅರಿವಾಗುತ್ತದೆ. ಆಗ ನಮ್ಮ ಸಾಮಾಜಿಕ ವ್ಯಕ್ತಿತ್ವವು ಬಹು ಪಾಲು ಕುಂಠಿತಗೊಂಡು ಮನಸ ಮುದುಡುತ್ತದೆ. ಹೀಗೆ ಭಾಷೆಯು ವೈಯಕ್ತಿಕ ಮತ್ತು ಸಾಮಾಜಿಕ ಎರಡೂ ನೆಲೆಗಳನ್ನು ಪಡೆದಿದೆಯೆಂಬುದು ಸ್ಪಷ್ಟವಾಗುತ್ತದೆ. ಒಂದು ರೀತಿಯಲ್ಲಿ ಮನುಷ್ಯನಿಗೆ ಅನ್ನ, ವಸ್ತ್ರ, ವಸತಿಗಳಂತೆಯೇ, ಅವನನ್ನು ಮನುಷ್ಯನನ್ನಾಗಿ ಮಾಡಲು ಭಾಷೆಯೂ ಆವಶ್ಯಕ ಎಂದು ಹೇಳಬಹುದು.

ನಮ್ಮ ದೇಶದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ನೋಡಿದಾಗ ಇಲ್ಲಿ ಅನೇಕ ಧರ್ಮಗಳಿರುವಂತೆಯೇ ಅನೇಕ ಭಾಷೆಗಳೂ ಇವೆ. ಸ್ವಾತಂತ್ರ್ಯಾನಂತರ ನಮ್ಮ ದೇಶವನ್ನು ಭಾಷಾವಾರು ಪ್ರಾಂತ್ಯಗಳು ವಿಂಗಡಿಸಲಾಯಿತು. ಇದರಿಂದ ಪ್ರತಿಯೊಂದು ಪ್ರಾಂತ್ಯದ ನಾಡು ನುಡಿಯು ತನ್ನ ಪರಂಪರೆಯನ್ನು ಗುರುತಿಸಿಕೊಳ್ಳಲು ಮತ್ತು ತನ್ನ ಮುಂದಿನ ದಾರಿಯನ್ನು ಗುರುತಿಸಿಕೊಳ್ಳಲು ಅನುವಾಯಿತು. ಹೀಗೆ 1956 ರಲ್ಲಿ ಏಕೀಕೃತ ಕರ್ನಾಟಕ ಉದಯವಾದಾಗ ಬಹುಸಂಖ್ಯಾತ ಕನ್ನಡಿಗರ ಪ್ರದೇಶವೆಲ್ಲಾ ಒಂದಾಯಿತು. ಅಂದಿನ ಕರ್ನಾಟಕದಲ್ಲಿ ಕನ್ನಡಿಗರು ಕನ್ನಡಾಭಿಮಾನವುಳ್ಳವರಾಗಿದ್ದರು. ಈಗ ಪರಿಸ್ಥಿತಿ ಬದಲಾಗಿ ಕನ್ನಡಾಭಿಮಾನವುಳ್ಳವರು ಕಡಿಮೆಯಾಗುತ್ತಿದ್ದಾರೆ. ಈ ಸ್ಥಿತಿಯಲ್ಲಿ ಸಿರಿವಂತ ಕನ್ನಡಿಗರು ತಮ್ಮ ಅಸ್ತಿತ್ವವನ್ನು ಯಾವ ರೀತಿಯಲ್ಲಿ ಉಳಿಸಿಕೊಳ್ಳಬಹುದು ? ತನ್ಮೂಲಕ ತಮ್ಮ ಸಿರಿಗನ್ನಡವನ್ನು ಯಾವ ರೀತಿಯಲ್ಲಿ ಗೆಲಿಸಿ, ಬಾಳಿಸಬಹುದು. ಇದನ್ನು ಈ ಲೇಖನದಲ್ಲಿ ವಿವೇಚಿಸಲಾಗಿದೆ.

ಮೊದಲಿಗೆ, ತನ್ನ ಅಸ್ತಿತ್ವಕ್ಕಾಗಿ ತಾನು ಹೋರಾಡಬೇಕಾದ ಪರಿಸ್ಥಿತಿ ಕನ್ನಡ ನಾಡಿಗೆ-ನುಡಿಗೆ ಏಕೆ ಬಂತು ? ಇದಕ್ಕೆ ಕನ್ನಡಿಗರ ಅನ್ಯ ಭಾಷಾ ವ್ಯಾಮೋಹ ಕಾರಣವೇ ಹೊರತು ಬೇರೆಯಲ್ಲ. ಹಿಂದಿ, ತಮಿಳು, ಮಲಯಾಳಂ, ತುಳು ಈ ಎಲ್ಲ ಭಾಷೀಯರೊಂದಿಗೆ ಬೆಳೆಯುತ್ತಿರುವ (?) ಕನ್ನಡ ಭಾಷೀಯರು ಎಲ್ಲರೊಂದಿಗೆ ವ್ಯವಹರಿಸುವಾಗ ಬಳಕೆಯ ಭಾಷೆಯಾಗಿ ಇಂಗ್ಲೀಷನ್ನೇ ಬಳಸುತ್ತಾರೆ. ಬ್ರಿಟಿಷರಿಂದ ಕೊಡುಗೆಯಾಗಿ ಬಂದ ಇಂಗ್ಲೀಷ್ ಮೇಲ್ನೋಟಕ್ಕೆ ಎಲ್ಲರನ್ನೂ ಒಗ್ಗೂಡಿಸುವಂತಿದ್ದರೂ, ವಾಸ್ತವವಾಗಿ ಅದು ನಮ್ಮನ್ನು ತನ್ನದೇ ಲೋಕಕ್ಕೆ ಕರೆದೊಯ್ಯುತ್ತಿದೆ. ಇಂಗ್ಲೀಷನ್ನು ನಾವು ಕಲಿಯಬಹುದಾದ ಒಂದು ಭಾಷೆಯಾಗಿಯಷ್ಟೇ ಮನ್ನಿಸುತ್ತಿಲ್ಲ ; ಅದು ನಮ್ಮ ಸ್ಥಾನ ಗೌರವ ಪ್ರತಿಷ್ಠೆಗಳ ಸಂಕೇತವಾಗಿಯೂ ಮಾನ್ಯತೆ ಪಡೆಯುತ್ತಿರುವುದು ಶೋಚನೀಯವಾಗಿದೆ. ಆ ಭಾಷೆಗೆ ಇಂಥ ಮನ್ನಣೆ ನೀಡಿರುವವರು ಆ ಭಾಷೆಯನ್ನಷ್ಟೇ ಅಲ್ಲ ಆ ಸಂಸ್ಕೃತಿಯನ್ನೂ ಬರಮಾಡಿಕೊಂಡು, ಪರಂಪರಾಗತ ಮೌಲ್ಯಗಳನ್ನು ಹೊಂದಿರುವ ನಮ್ಮ ಸಂಸ್ಕೃತಿಯನ್ನು ಮರೆಯುತ್ತಿರುವುದು ನಮ್ಮ ದುರ್ದೈವ. ಇಂದಿನ ದಿನಗಳಲ್ಲಿ 'Survive' ಆಗಲು ಇಂಗ್ಲೀಷ್ ಬೇಕೆನ್ನುವಷ್ಟರ ಮಟ್ಟಿಗೆ ಅದು ಕನ್ನಡಿಗರ ಮೇಲೆ ಪ್ರಭಾವ ಬೀರಿದೆಯೆಂದರೆ, ಇಂಗ್ಲೀಷ್ ಮತ್ತು ಕನ್ನಡಕ್ಕೆ ಯಾವ ರೀತಿಯಲ್ಲಿ ಸ್ಥಾನ ನೀಡುತ್ತಿದ್ದಾರೆಂಬುದರ ಅರಿವಾದೀತು. ಇಂತಹ ಭ್ರಮಾಲೋಕದಲ್ಲಿ ಬದುಕುವ ಜನ, ಇಂಗ್ಲೀಷ್ ಅನಿವಾರ್ಯವೆಂಬ ಪರಿಸರವನ್ನು ಸೃಷ್ಟಿಸಿ, ಇತರರ ಮೇಲೂ ಅದೇ ಮಾಯಾಪರದೆಯನ್ನೆಳೆಯುತ್ತಿದ್ದಾರೆ. ಇಂಗ್ಲೀಷ್ ಮಾಧ್ಯಮವುಳ್ಳ ಶಾಲೆಗಳ ಬಗ್ಗೆ ಪ್ರಸಿದ್ಧ ಪತ್ರಿಕೆಯೊಂದರ ವಾಚಕರ ವಾಣಿಯಲ್ಲಿ ಬರೆಯುತ್ತಾ ಹಳ್ಳಿಗಳಲ್ಲಿ ಕನ್ನಡದಲ್ಲೇ ಕಲಿತು ಅನಂತರ ಪಟ್ಟಣಕ್ಕೆ

ಬಂದಾಗ ಇಲ್ಲಿನ ಇಂಗ್ಲೀಷ್ ವಾತಾವರಣಕ್ಕೆ ಹೊಂದಿಕೊಳ್ಳುವುದು ಕಷ್ಟವಾಗುತ್ತದೆ. ಆದ್ದರಿಂದ ಹಳ್ಳಿಗಳಿಗೂ ಇಂಗ್ಲೀಷ್ ಮಾಧ್ಯಮದ ಶಾಲೆಗಳು ಬೇಕು ಎಂದೊಬ್ಬರು ಅಭಿಪ್ರಾಯ ಪಟ್ಟಿದ್ದಾರೆ. ಅಂದರೆ, ಈ ಇಂಗ್ಲೀಷ್‌ನ ವ್ಯಾಮೋಹ ಹಳ್ಳಿಗಳಿಗೂ ಪಸರಿಸುತ್ತಿದೆಯೆಂಬುದರಲ್ಲಿ ಸಂದೇಹವಿಲ್ಲ. ಇಂಗ್ಲೀಷ್ ಭಾಷೆಯನ್ನು ಕಲಿಯುವುದರಲ್ಲಿ ಯಾವ ತಪ್ಪಿಲ್ಲವಾದರೂ ಅದೇ ವಾತಾವರಣದಲ್ಲಿ ಶಿಕ್ಷಣ ಕಲಿಯಬೇಕೆಂಬ ಮತ್ತು ಇಂಗ್ಲೀಷ್ ಅನಿವಾರ್ಯವೆಂಬ ಭಾವನೆ ಇವರಿಗೇಕೆ ಮೂಡಿತು ?

ಯಾವ ಭಾಷೆಯಿಂದ ನಮಗೆ ಹೆಚ್ಚು ಅನುಕೂಲವಿದೆಯೋ ಅಥವಾ ಯಾವ ಭಾಷೆ ಎಲ್ಲರ ಭಾಷೆಯಾಗಿದೆಯೋ ಅದನ್ನು ಜನರು ಅನುಸರಿಸುತ್ತಾರೆ. ಒಟ್ಟಿನಲ್ಲಿ ಅದರಿಂದ ಅವರಿಗಾಗುವ ಲಾಭ ಮುಖ್ಯ. ತನ್ನದೇ ಆದರೂ ಎಲ್ಲರ ನಡುವೆ 'ಅನ್ಯ' ವೆನಿಸುವ ಭಾಷೆಯನ್ನು ಬಳಸಲು ಯಾರೂ ಇಷ್ಟಪಡುವುದಿಲ್ಲ. ಅದರಲ್ಲೂ ಸುಖಾಪೇಕ್ಷಿಯಾದ ಮಾನವ ತನ್ನ ಭಾಷೆಯಿಂದ ತೊಡಕುಗಳನ್ನೆದುರಿಸಿ ಆ ಕಾಲಕ್ಕೆ ಅಪ್ರಸ್ತುತವೆನಿಸಿದಾಗ, ಸಾಮಾನ್ಯವಾಗಿ ಅದನ್ನು ಕೈಬಿಡಲು ಹಿಂಜರಿಯುವುದಿಲ್ಲ. ಯಾವ ಭಾಷೆ ಸಾಮಾಜಿಕ ಪರಿಸರದಲ್ಲಿ ಅವನ ಕಷ್ಟಗಳಿಗೆ ನಿವೃತ್ತಿಯನ್ನು ನೀಡುತ್ತದೋ ಅದನ್ನವನು ಅವಲಂಬಿಸುತ್ತಾನೆ. ಕಷ್ಟಪಟ್ಟಾದರೂ ಕಲಿಯುತ್ತಾನೆ. ಹಳ್ಳಿಗರು ಮತ್ತು ಪಟ್ಟಣದವರು ಎಲ್ಲರಿಗೂ ಇರುವ ಇಂಗ್ಲೀಷ್‌ನ ವ್ಯಾಮೋಹ ಈ ರೀತಿಯದು. ಹಳ್ಳಿಗಳಲ್ಲಿ, ಅಂಚೆ ತಂತಿ ಇಲಾಖೆಯ ಸಂಪರ್ಕ, ಬ್ಯಾಂಕ್‌ನ ವ್ಯವಹಾರಗಳು, ಕೋರ್ಟು ಕಛೇರಿಗಳ ವ್ಯವಹಾರ ಮತ್ತು ಭವಿಷ್ಯದಲ್ಲಿ ಇಂಗ್ಲೀಷ್ ವಾತಾವರಣವನ್ನೆದುರಿಸಬೇಕಾದೀತೆಂಬ ಭಯ-ಇವು ಅವರನ್ನು ಇಂಗ್ಲೀಷನ್ನು ಆದರಿಸುವಂತೆ ಮಾಡಿದೆ. ನಗರವಾಸಿಗಳಿಗಾದರೋ ತಮ್ಮ ಇತರ ಸಹಚರರೊಂದಿಗೆ ಎಲ್ಲ ಭೇದ ಮರೆತು ಬೆರೆಯುವ ಸೌಲಭ್ಯ ಮತ್ತು ವಿವಿಧ ತಾಂತ್ರಿಕಜ್ಞಾನ ಇವುಗಳನ್ನು ಇಂಗ್ಲೀಷ್ ತಂದುಕೊಟ್ಟಿದೆ. ಇದರಿಂದ ಇಂಗ್ಲೀಷ್ ಸಕಲರಿಗೂ ಸ್ವಾಗತಾರ್ಹವೆನಿಸಿದೆ.

ಹಾಗಾದರೆ, ಇಂಗ್ಲೀಷ್ ನಮಗೆ ಅನಿವಾರ್ಯವೇ ? ಖಂಡಿತಾ ಇಲ್ಲ. ವ್ಯಾವಹಾರಿಕವಾಗಿ ಹೇಳುವುದಾದರೆ, ಯಾವುದೇ ಕಛೇರಿಯಿರಲಿ, ಅಲ್ಲಿ ಪ್ರಾದೇಶಿಕ ಭಾಷೆಗೆ ಮಾನ್ಯತೆ ಇದ್ದೇ ಇರುತ್ತದೆ. ಅದನ್ನು ನಾವು ಉಳಿಸಿಕೊಳ್ಳಬೇಕಾಗುತ್ತದೆ ಅಷ್ಟೆ, ಉದಾಹರಣೆಗೆ ಪತ್ರ ಬರೆಯುವಾಗ, ಅದರಲ್ಲಿ ವಿಳಾಸವನ್ನು ಕನ್ನಡದಲ್ಲಿ ಬರೆದರೆ ಪತ್ರ ನಿಮ್ಮ ಕಡೆಯವರಿಗೆ ತಲುಪುವುದಿಲ್ಲವೇ ? ಅದನ್ನು ಇಂಗ್ಲೀಷಿನಲ್ಲೇ ಬರೆಯಬೇಕೆಂದು ಕಛೇರಿಯವರು ನಿರ್ಬಂಧಿಸಿದ್ದಾರೆಯೇ ? ಇಲ್ಲ. ಆದರೆ ಎಷ್ಟು ಜನ ಕನ್ನಡದಲ್ಲಿ ಬರೆಯುತ್ತಾರೆ ? ಇನ್ನು ತಂತಿಕಛೇರಿಗಳಲ್ಲಿ ತಂತಿಯನ್ನು (Telegram) ಕನ್ನಡದಲ್ಲಿ ಬರೆಯುವ ಅವಕಾಶವಿದೆ. (ಭಾಷೆ–ಕನ್ನಡ. ಲಿಪಿ ಮಾತ್ರ ಇಂಗ್ಲೀಷ್). ಈ ರೀತಿಯಾಗಿ ಶುಭಾಶಯಗಳನ್ನೂ ಕನ್ನಡದಲ್ಲಿ ಕಳುಹಿಸುವ ಅವಕಾಶವಿದೆ (ಕರ್ನಾಟಕದೊಳಗೆ). ಆದರೆ ಇದನ್ನೆಲ್ಲಾ ಬಳಸುವವರೂ ಅಪರೂಪವೇ. ಬ್ಯಾಂಕಿನಲ್ಲೂ ಚೆಕ್/ಚಲನ್ ಕನ್ನಡ ಮತ್ತು ಇಂಗ್ಲೀಷ್ ಎರಡರಲ್ಲೂ ಇರುವುದಾದರೂ, ಸಾಮಾನ್ಯವಾಗಿ ಎಲ್ಲರೂ ಇಂಗ್ಲೀಷಿನದರಲ್ಲೇ ಅದನ್ನು ಭರ್ತಿಮಾಡಿಕೊಡುತ್ತಾರೆ.

ಇನ್ನು ಇಂಗ್ಲೀಷಿನಿಂದ ಬರುವ ಜ್ಞಾನದ ಬಗ್ಗೆ ಹೇಳುವುದಾದರೆ, ಅದರ ಸತ್ಯವನ್ನು ಕೆಲಮಟ್ಟಿಗೆ ಒಪ್ಪಿಕೊಳ್ಳಬಹುದು. ಇಂಗ್ಲೀಷಿನಲ್ಲಿ ಬಹುಪಾಲು ಎಲ್ಲ ಕ್ಷೇತ್ರಗಳ ಬಗ್ಗೆ ತಿಳಿವನ್ನು ನೀಡಬಲ್ಲಂಥ ಗ್ರಂಥಗಳಿವೆ. ಆದರೆ ಈ ನೆಪದಿಂದ ಇಂಗ್ಲೀಷ್‌ನ ಮೊರೆಹೋದವರು ಎಷ್ಟರ ಮಟ್ಟಿಗೆ ಆ ಭಾಷೆಯನ್ನು ಕಲಿತಿರುತ್ತಾರೆ ? ಕೆಲವರಿಗಂತೂ ಮೇಲು ಮೇಲೆ ಮಾತನಾಡುವುದಕ್ಕೆ ಬರುತ್ತದೆಯೇ ಹೊರತು, ಆ ಭಾಷೆಯಲ್ಲಿ ಒಂದು ಪ್ರಬಂಧ ಬರೆಯುವಷ್ಟಾದರೂ ಪಾಂಡಿತ್ಯವಿರುವುದು ಕೆಲವೇ ಕೆಲವು ಮಂದಿಗೆ. ಹಾಗೆ ನೋಡಿದರೆ, ಸಂಸ್ಕೃತದ ಗ್ರಂಥಗಳಲ್ಲಿ ಇನ್ನೂ ಬೆಳಕಿಗೆ ಬಾರದೆ ಉಳಿದಿರುವ ಜ್ಞಾನವೆಷ್ಟೋ ! ಅದರ ಬಗ್ಗೆ ಮಾತ್ರ ಯಾರೂ ಹೆಚ್ಚು ಯೋಚಿಸುವುದಿಲ್ಲ. ಯೋಚಿಸಿದರೂ ಶಾಲೆಗಳಲ್ಲಿ ಅಂಕಗಳಿಸುವಷ್ಟು ಮಾತ್ರ. ಹೀಗೆ ಯಾವ ಭಾಷೆಯನ್ನೂ ಪೂರ್ಣವಾಗಿ ಕಲಿಯದೆ, ಯಾವುದೇ ಭಾಷೆಯಿಂದ ಬರಬಹುದಾಗಿದ್ದ ಜ್ಞಾನದಿಂದ, ತಿಳಿವಿನಿಂದ ಇವರು ವಂಚಿತರಾಗುತ್ತಿದ್ದಾರೆ ಅಷ್ಟೆ. ಕನ್ನಡದ ಅನೇಕ ವಿದ್ವಾಂಸರು-ಹಿಂದಿನ ತೀ.ನಂ.ಶ್ರೀ. ಬಿ.ಎಂ.ಶ್ರೀ. ಜಿ.ಪಿ. ರಾಜರತ್ನಂ ಇಂದಿನ ಪ್ರೊ. ಎಲ್.ಎಸ್. ಶೇಷಗಿರಿರಾವ್, ವಿ. ಕೃ. ಗೋಕಾಕ್, ಯು. ಆರ್. ಅನಂತಮೂರ್ತಿ ಮುಂತಾದವರು ಕನ್ನಡ ಮತ್ತು ಇಂಗ್ಲೀಷ್ ಎರಡನ್ನೂ ಕರಗತ ಮಾಡಿಕೊಂಡವರು, ಎರಡೂ ಭಾಷೆಗಳ ಅಗಾಧ

ಜ್ಞಾನವನ್ನು ಸಂಪಾದಿಸಿದವರು. ಅದ್ದರಿಂದ ಭಾಷೆಗೆ ಇರುವ ಶಕ್ತಿ ಅಗಾಧವಾದುದು. ಅದು ಬೆಳೆಸಿದಷ್ಟೂ ಬೆಳೆಯಬಲ್ಲದು. ಪ್ರಯೋಗಿಸಿದಷ್ಟೂ ಪ್ರಫುಲ್ಲವಾಗಿ ಅರಳಬಲ್ಲುದು ಎಂಬುದನ್ನು ನಾವು ಅರಿಯಬೇಕು.

ಇಂತಹ ಇಂಗ್ಲೀಷ್ ವ್ಯಾಮೋಹಿಗಳು ತಮ್ಮ ಕೆಲಸದಲ್ಲೂ ಕನ್ನಡದ ಬಗ್ಗೆ ಕಳಕಳಿಯನ್ನು ವ್ಯಕ್ತಪಡಿಸುವುದಿಲ್ಲ. ಕನ್ನಡಿಗರಿಗೆ ಕಚೇರಿಗಳಲ್ಲಿ ಇರುವ ಅವಕಾಶಗಳ ಬಗ್ಗೆ ಕನ್ನಡಿಗನೊಬ್ಬನು ಇತರರಿಗೆ ತಾನಾಗೇ ಎಂದೂ ಪರಿಚಯಿಸುವುದಿಲ್ಲ. ಬಹುಪಾಲು ನೌಕರರಿಗೆ ಕೆಲಸವೂ ಜೀವನ ನಿರ್ವಹಣೆಯ ಮಾರ್ಗ, ಅಷ್ಟೆ. ಕಚೇರಿಗಳ ಬಗ್ಗೆಯಾಗಲೀ, ಕಚೇರಿಗಳಲ್ಲಿ ತಮ್ಮ ವಿವಿಧ ರೂಪದ ಪಾತ್ರಗಳ ಬಗ್ಗೆಯಾಗಲೀ ಎಂದೂ ತಲೆಕೆಡಿಸಿಕೊಳ್ಳುವುದಿಲ್ಲ. ಅಂತಹವರಿಗೆ ಕಚೇರಿಯೂ ಕನ್ನಡ ಬಳಸಬಹುದಾದ ಜಾಗ ಎಂಬಂತೆ ಎಂದೂ ಗೋಚರಿಸುವುದಿಲ್ಲ. ಕಾರಣ, ಅವನು ತನ್ನ ಕನ್ನಡಭಾಷೆಯ ಬಗ್ಗೆ ಎಂದೂ ಪ್ರಜ್ಞಾವಂತನಾಗಿರುವುದಿಲ್ಲ. ಒಮ್ಮೆ ಗ್ರಾಹಕರೊಬ್ಬರೊಡನೆ ದೂರವಾಣಿಯಲ್ಲಿ ಸಹಜವಾಗಿ ಕನ್ನಡದಲ್ಲೇ ಮಾತನಾಡಿದೆ. 'ಇಷ್ಟು ದಿವಸದ ಮೇಲೆ ಕನ್ನಡದಲ್ಲಿ ಮಾತನಾಡುವವರು ಸಿಕ್ಕಿದ್ದೀರ, ಕಛೇರಿಗಳಲ್ಲಿ ಕನ್ನಡ ಮಾತನಾಡುವವರೇ ಕಡಿಮೆ' ಎಂದರು. ಅವರು ಈ ಕನ್ನಡಾಭಿಮಾನೀ ಕನ್ನಡಿಗನ ಮಾತು ಕೇಳಿ ನನಗೂ ಸಂತೋಷವಾಯಿತು. ಹಿಂದೆ ಹೇಳಿದಂತೆ, ಅನೇಕ ಗ್ರಾಹಕರೇ ಕನ್ನಡವನ್ನು ಬಳಸುವುದಿಲ್ಲ. ಇನ್ನು ಉಳಿದಂತೆ ನೌಕರರು ಆ ಬಗ್ಗೆ ಅರಿಯದ ಗ್ರಾಹಕರಿಗೆ ಪರಿಚಯಿಸುವುದಿಲ್ಲ. ಹೀಗ, ಕೆಲವರ ಅಜ್ಞಾನ ಮತ್ತು ಹಲವರ ಅಲಕ್ಷ್ಯ ಇವುಗಳ ನಡುವೆ ಕನ್ನಡ ತತ್ತರಿಸುತ್ತಿದೆ.

ಇದಕ್ಕೆಲ್ಲಾ ಕಾರಣವೆಂದರೆ, ಅನೇಕರು ತಮಗೆ ಇಂಗ್ಲೀಷ್ ಬರುವುದಿಲ್ಲವೆಂದು ಒಪ್ಪಿಕೊಳ್ಳಲು ಸಿದ್ಧರಿಲ್ಲದಿರುವುದು ಮತ್ತು ತಮ್ಮ ಇಂಗ್ಲೀಷ್‌ಜ್ಞಾನವನ್ನು ಅನವಶ್ಯಕವಾಗಿಯಾದರೂ ಆದಷ್ಟೂ ಪ್ರದರ್ಶಿಸಲಿಚ್ಛಿಸುವುದು. ಮತ್ತೊಂದು ಕಾರಣವೆಂದರೆ, ತನ್ನ ನಾಡಿನ ನುಡಿಯಾದ, ತನ್ನ ಮಾತೃಭಾಷೆಯಾದ ಕನ್ನಡವನ್ನು ಬಳಸುವ ಅವಕಾಶವನ್ನು ಬಳಸಿಕೊಳ್ಳುವ ಆತುರ, ಕಾತರ ಮತ್ತು ಹಂಬಲಗಳಿಲ್ಲದಿರುವುದು. ಒಮ್ಮೆ ತಾಯಿಯೊಬ್ಬಳು ತನ್ನ ಚಿಕ್ಕ ಮಗಳಿಗೆ ಹೇಳಿದುದು ಹೀಗೆ, 'ಅವರು ಇಂಗ್ಲೀಷಿನಲ್ಲಿ ಮಾತನಾಡಿಸಿದರೆ, ನೀನೂ ಇಂಗ್ಲೀಷಿನಲ್ಲೇ ಮಾತನಾಡು' ಎಂದು. ಇಲ್ಲಿ ಇಂಗ್ಲೀಷ್ ತಿಳಿಯದಿದ್ದರೆ ತಮಗೆ ಅವಮಾನ ಎಂಬ ಭಾವನೆಯನ್ನು ಚಿಕ್ಕ ಮಕ್ಕಳಲ್ಲೇ ತುಂಬುತ್ತಿದ್ದಾರೆಂದರೆ, ಅದೇ ಪರಂಪರೆ ಇನ್ನೂ ಎಷ್ಟು ವರ್ಷ ಮುಂದುವರಿಯುತ್ತದೆಂಬುದರ ಅರಿವಾದೀತು !

ಇಂಥ ವಾತಾವರಣವನ್ನು ಸೃಷ್ಟಿಸಿದವರಾರು ? ಈ ಪ್ರಶ್ನೆಗೆ ಉತ್ತರವು ನಮ್ಮನ್ನೇ ಬೊಟ್ಟು ಮಾಡಿ ತೋರಿಸಿದರೆ ಅದರಲ್ಲಿ ಆಶ್ಚರ್ಯವೂ ಇಲ್ಲ, ತಪ್ಪೂ ಇಲ್ಲ. ನಮ್ಮ ಇಂಗ್ಲೀಷ್ ಜ್ಞಾನದ ಮೂಲಕವೇ ಒಳಹೋದ ನಾವು ಪ್ರದರ್ಶಿಸುವುದೂ ಅದನ್ನೇ. ಅವರಿವರೊಡನೆ ಇಂಗ್ಲೀಷ್‌ನಲ್ಲಿ ಸರಾಗವಾಗಿ ಮಾತನಾಡುವ ವ್ಯಕ್ತಿ ಬಹುಬೇಗ ಹೆಸರು ಮಾಡುತ್ತಾನೆ.

ಹೀಗಾದಾಗ ಇತರರಿಗೂ 'ತಾನೂ ಇಂಗ್ಲೀಷ್ ಕಲಿತಿದ್ದರೆ' ಎಂಬ ಭಾವನೆ ಬಂದರೆ ಅದು ಸಹಜವೆಂದೇ ಒಪ್ಪಿಕೊಳ್ಳಬೇಕಾಗುತ್ತದೆ. ಹೀಗೆ ಇಂಗ್ಲೀಷಿನತ್ತ ಒಲವು, ಕೆಲವು ಕೇಂದ್ರ ಕಛೇರಿಗಳಲ್ಲಿ ಹಿಂದೀ ಪ್ರಸಾರ, ಅನ್ಯಭಾಷಾ ಪರಿಸರ ಹೀಗೇ ನಾನಾಮುಖಗಳಲ್ಲಿ ಅವನ ಭಾಷಾಭಿಮಾನ ಹರಿದು ಹಂಚಿ ಹೋಗಿ ತನ್ನ ಭಾಷೆಯೂ ಅವನಿಗೆ ಇತರ ಭಾಷೆಗಳಂತೆಯೇ ಒಂದು 'ಸಂಪರ್ಕ ಸಾಧನೆ' ಮಾತ್ರವೇ ಆಗಿ ಉಳಿಯುತ್ತದೆ. ಹೀಗಾದಾಗ ಕನ್ನಡದ ಬಗೆಗಿನ ಅವನ ಅಭಿಮಾನ ಮಾಸಲಾಗಿ, ಅವನು ತನ್ನ ವ್ಯವಹಾರದಲ್ಲಿ ಎಂದೂ ಕನ್ನಡವನ್ನು ರೂಢಿಸಿಕೊಳ್ಳಲಾರ. ಕೆಲವರಂತೂ ಕನ್ನಡ ಗೊತ್ತಿದ್ದೂ ಕನ್ನಡಿಗರೊಂದಿಗೂ (ಅದು ತಿಳಿದಿದ್ದೂ) ಇಂಗ್ಲೀಷಿನಲ್ಲೇ ಮಾತನಾಡುತ್ತಾರೆಂದರೆ ಎಂತಹ ವಿಷಾದನೀಯ ವಿಸ್ಮಯ !

ಒಬ್ಬ ತಮಿಳುಭಾಷಿಗೆ ಇನ್ನೊಬ್ಬ ತಮಿಳುಭಾಷಿಯೊಂದಿಗೆ ಬೆರೆಯಲು ಬೇರೆ ಯಾವ ಕಾರಣವೂ ಬೇಡ. ಅವನೊಬ್ಬ ತಮಿಳು ಭಾಷಿ ಎಂಬುದಷ್ಟೇ ಸಾಕು. ತಮಿಳು ಬಲ್ಲ ಅಧಿಕಾರಿ/ನೌಕರರ ನಡುವೆಯೂ ಇದೇ ರೀತಿ ತಮಿಳಿನಲ್ಲೇ ಮಾತು ಸಾಗುತ್ತದೆ. ಆದರೆ ಒಬ್ಬ ಕನ್ನಡಿಗನು ಇಷ್ಟು ಸರಳವಾಗಿ ವ್ಯವಹರಿಸುವುದಿಲ್ಲ. ಅವನಿಗೆ ಅನ್ಯರೊಂದಿಗೆ ಬೆರೆಯಲು ಅವನದೇ ಆದ ಕಾರಣಗಳು ಬೇಕು. ಅಧಿಕಾರಿಗಳೊಂದಿಗಂತೂ, ಅವರು ಕನ್ನಡದವರೆಂದು ತಿಳಿದಿದ್ದರೂ, ಕನ್ನಡದಲ್ಲಿ ಮಾತನಾಡಲು ಹಿಂಜರಿಯುತ್ತಾನೆ.

ಹಿಂದೆ ಸುಧಾ ಪತ್ರಿಕೆಯಲ್ಲಿ ಒಂದು ಪುಟ್ಟ

ಲೇಖನವಿತ್ತು, 'ಒಣಗಿದ್ದು ನಿಂಬೆ-ಅಭಿಮಾನವಲ್ಲ' ಎಂಬ ಶೀರ್ಷಿಕೆಯಲ್ಲಿ. ಅದರಲ್ಲಿ ಒಬ್ಬ ತಮಿಳು ಭಾಷಿಯು ಒಣಗಿದ ನಿಂಬೆಹಣ್ಣನ್ನು ಕೊಂಡು ತಂದಿರುತ್ತಾನೆ. ಹಾಗೆ ಒಣಗಿದ್ದನ್ನು ತರಲು ಅವನು ಕೊಡುವ ಕಾರಣ 'ನಮ್ಮವನೇ ಒಬ್ಬ ಮಾರುತ್ತಿದ್ದಾನೆ ಅದಕ್ಕೇ ಅದನ್ನೇ ಕೊಂಡುತಂದೆ'. ಇಂತಹ ಅಭಿಮಾನ ಕನ್ನಡಿಗರಲ್ಲಿ ಏಕೆ ಉದಯಿಸಿರುವುದಿಲ್ಲ? ಬಹುಶಃ ಅವರಿಗೆ ಭಾಷೆಯ ಹಿನ್ನೆಲೆಯಿಲ್ಲದೆ ಉತ್ತಮವಾದುದನ್ನು ಮಾತ್ರ ಗುರುತಿಸುವ ಅಪೇಕ್ಷೆ ಇರಬಹುದೆ? ಅಥವಾ ಕನ್ನಡದ ತವರೂರಾದ ಕರ್ನಾಟಕದಲ್ಲಿ ತಾವಿರುವುದರಿಂದ, ಭಾಷೆಯ ಬಗ್ಗೆ ತಲೆಕೆಡಿಸಿಕೊಳ್ಳುವ ಅವಶ್ಯಕತೆ ಕನ್ನಡಿಗರಿಗೆ ಬರಲಿಲ್ಲವೇ ?

ಒಂದೇ ಮಾತಿನಲ್ಲಿ ಹೇಳುವುದಾದರೆ, ನಾವು ಕನ್ನಡಿಗರು ಕನ್ನಡ ಪರಿಸರ ನಿರ್ಮಿಸುವುದಕ್ಕೆ ಹಿಂಜರಿಯುತ್ತೇವೆ. ಯಾರು ಯಾವ ಭಾಷೆಯಲ್ಲಿ ವ್ಯವಹರಿಸಿದರೆ ಅದನ್ನು ಅನುಸರಿಸುವುದು, ಇಲ್ಲವೇ ಇಂಗ್ಲೀಷಿಗೆ ಶರಣು ಹೋಗುವುದು–ಇದು ನಮ್ಮ ಧೋರಣೆಯಾಗಿದೆ. ಇಂಗ್ಲೀಷಿನ ಮರೆಯಲ್ಲಿ ಕನ್ನಡಿಗರು ಕನ್ನಡತನದಿಂದ ನುಣುಚಿಕೊಳ್ಳುತ್ತಿದ್ದೇವೆ.

ಏನೇ ಕಾರಣಗಳಿರಲಿ, ಅನ್ಯ ಭಾಷೀಯರು ಒಂದಾಗಿ 'ತಮ್ಮತನ' ವನ್ನು ಮರೆಯುತ್ತಿದ್ದರೂ ಬಿಡಿ ಬಿಡಿಯಾಗಿ ಉಳಿದ ಕನ್ನಡಿಗ ಆ ಗುಂಪಿನ ಮುಂದೆ ಒಂಟಿಯಾಗೇ ನಿಲ್ಲುತ್ತಾನೆ. ಒಗ್ಗಟ್ಟಿನಿಂದ ಮತ್ತು ಅದರ ಎಲ್ಲ ಲಾಭಗಳಿಂದ ವಂಚಿತನಾಗಿ ಏಕಾಕಿತನದ ಲೋಪ ದೋಷಗಳನ್ನು ಅನುಭವಿಸಬೇಕಾಗಿ ಬಂದರೆ ಅದು ಅವನು ತಾನಾಗಿಯೇ ಬರಮಾಡಿಕೊಂಡ 'ಅನಿಷ್ಟ' ಎನ್ನಬೇಕಾಗುತ್ತದೆ. ಇದನ್ನು ನಿವಾರಿಸಿಕೊಳ್ಳಲು ಕನ್ನಡಿಗರಿಗೆ ಈಗ ತೆರೆದಿರುವ ದಾರಿ ಒಂದೇ ! ಅದು ಏನೆಂದರೆ ತನ್ನ ಭಾಷೆಯ ಬಗ್ಗೆ ಅಭಿಮಾನ ತಳೆದು ಅನುಸರಿಸುವುದು, ಕನ್ನಡ ಬಳಸುವ ಅವಕಾಶ ಸಿಕ್ಕಷ್ಟೂ ಉಪಯೋಗಿಸುವುದು ಮತ್ತು ಕನ್ನಡಕ್ಕೆ ಆಪತ್ತು ತಗುಲಿದಲ್ಲೆಲ್ಲಾ ಅದನ್ನು ಧೈರ್ಯವಾಗಿ ಪ್ರತಿಭಟಿಸುವುದು. ಸಂಕೋಚ ಸ್ವಭಾವವು ವ್ಯಕ್ತಿತ್ವಕ್ಕೆ ಮೆರಗು ನೀಡುವುದಾದರೂ ಅದು ಎಲ್ಲ ಕಾಲದಲ್ಲೂ ನಿರೀಕ್ಷಿತವಲ್ಲವೆಂಬುದೂ ಸತ್ಯವೇ. ಸುದೀರ್ಘ ಇತಿಹಾಸ, ಭವ್ಯ ಪರಂಪರೆ, ಶ್ರೀಮಂತ ಸಂಸ್ಕೃತಿ, ಉನ್ನತ ಮೌಲ್ಯಗಳ ಸಾಧಿತ/ಸಾಧಕ ಕ್ಷೇತ್ರವಾದ ಕನ್ನಡನಾಡಿನ ಕನ್ನಡಿಗ ತನ್ನ ವ್ಯಕ್ತಿತ್ವವನ್ನು ಉಳಿಸಿಕೊಳ್ಳಬೇಕಾದರೆ, ತನ್ನ ಸಂಕುಚಿತ ಮನೋಭಾವಗಳ ಪೊರೆ ಕಳಚಿ ಹೊರಬರಲೇಬೇಕಾಗಿದೆ. ಈ ದಿಶೆಯಲ್ಲಿ ನಾವು ಈ ಕೆಳಕಂಡ ತೀರ್ಮಾನಗಳನ್ನು ತೆಗೆದುಕೊಳ್ಳಬಹುದಾಗಿದೆ.

1) ಕನ್ನಡದಲ್ಲಿ ಸಹಜವಾಗಿ ವ್ಯವಹರಿಸಬೇಕು. ಅನ್ಯ ಭಾಷೀಯರಿಗೆ ಇಂಗ್ಲೀಷ್ ಅಗತ್ಯವಿದ್ದು ಬಳಸುತ್ತಿದ್ದರೂ ನಾವು ಅನಿವಾರ್ಯವಾಗಿದ್ದಾಗಷ್ಟೇ ಇಂಗ್ಲೀಷ್ ಬಳಸೋಣ ಅನಗತ್ಯ ಇಂಗ್ಲೀಷ್ ಬಳಕೆಯನ್ನು ಸಂಪೂರ್ಣವಾಗಿ ಬಿಟ್ಟು ಬಿಡೋಣ.

2) ಸಾರ್ವಜನಿಕ ಸಂಪರ್ಕವಿರುವ ಕಚೇರಿಗಳಲ್ಲಿ ಗ್ರಾಹಕರ ಅಗತ್ಯ ತಿಳಿದು ಕನ್ನಡದಲ್ಲೇ ವ್ಯವಹರಿಸಿ, ಇಂಗ್ಲೀಷ್ ಭಾಷೆ ಬಳಕೆಯಿಂದಾಗುವ ತೊಡಕನ್ನು ನಿವಾರಿಸಿ, ಕನ್ನಡ ಭಾಷೆಯ ವ್ಯಾವಹಾರಿಕ ಶಕ್ತಿ ಪಡೆದಿದೆ ಎಂಬುದನ್ನು ಎಲ್ಲರಿಗೆ ಮನದಟ್ಟು ಮಾಡುವುದು ಅಗತ್ಯ.

3) ಕನ್ನಡ ಭಾಷೆಯಲ್ಲಿ ಬರೆಯುವಾಗ ಕನ್ನಡ ಪದಗಳನ್ನೇ ಆದಷ್ಟು ಬಳಸಬೇಕು. ಕೆಲವು ಸಂದರ್ಭದಲ್ಲಿ ಸರಿಯಾದ ಪದ ರೂಢಿಗೆ ಬಂದಿರದಿದ್ದರೆ ಹೊಂದುವ ಕನ್ನಡ ಪದವನ್ನು ಬಳಸಿ ಆವರಣದಲ್ಲಿ ಸಮಾನಾರ್ಥಕ ಇಂಗ್ಲೀಷ್ ಪದವನ್ನು ಬರೆಯಬಹುದು. ಕ್ರಮೇಣ ಕನ್ನಡ ಪದ ಆ ಅರ್ಥಶಕ್ತಿಯನ್ನು ಸ್ವತಂತ್ರವಾಗಿ ಪಡೆಯುತ್ತದೆ. ಈ ದಿಶೆಯಲ್ಲಿ ಭಾಷಾಂತರ ನಿರ್ದೇಶನಾಲಯದ ಸಹಕಾರವನ್ನು ಪಡೆಯುವುದು ಅಗತ್ಯ.

4) ಸಾಹಿತ್ಯಕ, ತಾಂತ್ರಿಕ, ವೈಜ್ಞಾನಿಕ ಹೀಗೆ ಯಾವುದೇ ವಿಷಯವನ್ನು ಕುರಿತು ಗ್ರಂಥ ರಚನೆ ಮಾಡಿದರೂ ಆದಷ್ಟೂ ಕನ್ನಡವನ್ನೇ ಬಳಸಬೇಕು. ಇದು ಸಂಕಲ್ಪದಿಂದ ಮಾತ್ರ ಸಾಧ್ಯವಾಗುವಂಥದು. ಎಲ್ಲ ವಿಷಯದ ಗ್ರಂಥಗಳು ಕನ್ನಡದಲ್ಲಿ ಲಭ್ಯವಾಗುವುದರಿಂದ ಕನ್ನಡ ಮಾತ್ರ ಕಲಿತರೆ ಜ್ಞಾನ ಕುಂಠಿತವಾಗುತ್ತದೆ ಎಂಬ ಭ್ರಮೆ ಮಾಯವಾಗುತ್ತದೆ.

ಕಚೇರಿಗಳು ನಾನಾ ರೀತಿಯ ಜನಗಳು ಸೇರಿ ಜನ ಸಮೂಹಕೇಂದ್ರಗಳಾಗಿರುವುದರಿಂದ ಅಲ್ಲಿನ ರೀತಿ, ನೀತಿ, ಧೋರಣೆಗಳು ಜನಜೀವನದ ಮೇಲೆ ಪ್ರಭಾವ ಬೀರುತ್ತವೆ. ಈ ಕಾರಣಗಳಿಂದ ಕಚೇರಿಯ ಕನ್ನಡ ಸಂಘಗಳು ವಿಶೇಷ ಕಾರ್ಯಪ್ರವೃತ್ತವಾಗಬೇಕು. ಅವು ಕನ್ನಡಿಗರಿಗೆ ಭಾಷೆಯ ಪರಂಪರೆ ಮತ್ತು ಶ್ರೀಮಂತಿಕೆಯನ್ನು ಮನದಟ್ಟು ಮಾಡಿ ಕನ್ನಡಿಗರ ಕನ್ನಡತನವನ್ನು ಕಾಪಿಡಬೇಕು.

# ಸರ್ಕಾರದ ಆಡಳಿತ ಮತ್ತು ಕನ್ನಡ

ರಾ. ಪ್ರಭುಶಂಕರ್

ಪ್ರಜೆಗಳಿಗಾಗಿ, ಪ್ರಜೆಗಳಿಂದ, ಪ್ರಜೆಗಳೇ ನಡೆಸುವ ಸರ್ಕಾರವೇ ಪ್ರಜಾಪ್ರಭುತ್ವ. ಆದರೆ ಕನ್ನಡ ನಾಡು ನುಡಿಯ ಬಗ್ಗೆ ಹೇಳುವುದಾದರೆ ಇದು ತಿರುಗು ಮುರುಗು. ಇಲ್ಲಿನ ಕನ್ನಡ-ಕರ್ನಾಟಕ-ಕನ್ನಡಿಗ ಇರುವುದೆಲ್ಲ ಸರ್ಕಾರಕ್ಕಾಗಿ. ಇದರಲ್ಲಿ ಕನ್ನಡದಿಂದ ಯಾವುದೇ ಲಾಭವಿಲ್ಲವೆಂದು ಸರ್ಕಾರ ನಡೆಸುವ ರಾಜಕಾರಣಿಗಳಿಗೆ ಚೆನ್ನಾಗಿ ಗೊತ್ತು. ಆದ್ದರಿಂದ ಹಿಂದ ಆದ್ಯ ರಂಗಾಚಾರ್ಯರು ಹೇಳಿದಂತೆ ಇಡಿಯ ಜಗತ್ತಿನ ರಾಷ್ಟ್ರಗಳಲ್ಲಿ ಅಥವಾ ಪ್ರಾಂತಗಳಲ್ಲಿ ತಮ್ಮ ರಾಜ್ಯ ಭಾಷೆಗಾಗಿ ಚಳುವಳಿ ನಡೆಸಬೇಕಾಗಿ ಬಂದುದು ಕರ್ನಾಟಕದಲ್ಲಿ ಮಾತ್ರ. ಇಂಥ ಸ್ಥಿತಿಯಲ್ಲಿ ಕನ್ನಡ ಉಳಿಸಿಕೊಳ್ಳುವುದೇ ದುಸ್ತರವಾಗಿರುವಾಗ ಬೆಳೆಸುವುದೆಷ್ಟು ಕಠಿಣ ಎಂಬುದನ್ನು ಊಹಿಸಿಕೊಳ್ಳಿ.

ಏಕೀಕರಣದ ನಂತರ ಕನ್ನಡವು ಎಷ್ಟರ ಮಟ್ಟಿಗೆ ಸರ್ಕಾರದ ಆಡಳಿತ ಭಾಷೆಯಾಗಿ ಜಾರಿಗೆ ಬಂದಿದೆ ಎಂಬುದನ್ನು ವಿವೇಚಿಸೋಣ : ಕನ್ನಡ ಮಾತನಾಡುವ ಪ್ರದೇಶವೆಲ್ಲ ಒಗ್ಗೂಡಬೇಕು, ಆಡಳಿತ ಭಾಷೆ ಕನ್ನಡವಾಗಬೇಕು, ಇದರಿಂದ ಆಡಳಿತಕ್ಕೆ ಅನುಕೂಲ, ಇಂಥ ಆಡಳಿತ ಜನರಿಗೆ ಉಪಯೋಗ ಎಂಬ ಆಶಯಗಳಿಂದ ಏಕೀಕರಣವಾಯಿತು. ಆದರೆ ಏಕೀಕರಣವಾದ ಬಗ್ಗೆ ಉತ್ಸಾಹ, ಸಂತಸಗಳಲ್ಲಿ ಮೈಮರೆತ ಕನ್ನಡಾಭಿಮಾನಿಗಳು ರಾಜ್ಯದ ಆಡಳಿತ ಭಾಷೆ ಕನ್ನಡವಾಗಬೇಕೆಂಬ ದೆಸೆಯಲ್ಲಿ ತಕ್ಷಣ ಗಮನ ನೀಡಲಿಲ್ಲ. ಆಡಳಿತವೂ ಈ ಬಗ್ಗೆ ಗಮನ ನೀಡಲಿಲ್ಲ. ಇದಕ್ಕೆ ಅನೇಕ ಕಾರಣಗಳನ್ನು ಹೇಳಬಹುದು. ಅವುಗಳಲ್ಲಿ ಒಂದು ವಿವಿಧ ಆಡಳಿತ ಪ್ರಾಂತಗಳಿಂದ ಬಂದ ಅಧಿಕಾರಿಗಳು ತಮ್ಮ ಸೇವಾ ಹಿತಾಸಕ್ತಿಯಲ್ಲಿ ಮರೆತಿದ್ದು, ವಿವಿಧ ಭಾಗದಲ್ಲಿ ಬಳಕೆಯಲ್ಲಿದ್ದ ಆಡಳಿತ ಪದಗಳನ್ನು ಇಲ್ಲಿ ಬಳಸುವಲ್ಲಿ ತೊಡಕಾದುದ್ದು, ಕನ್ನಡ ಬೆರಳಚ್ಚು ಯಂತ್ರ ತಯಾರಾಗದೆ ಇದ್ದುದರಿಂದ ಆತುರಪಟ್ಟು ತಾಲ್ಲೂಕು ಹಾಗೂ ವಿಭಾಗ ಮಟ್ಟದ ಕಚೇರಿಗಳಿಗೆ ಇಂಗ್ಲೀಷ್ ಬೆರಳಚ್ಚು ಯಂತ್ರಗಳನ್ನು ಒದಗಿಸಿದ್ದು ಇತ್ಯಾದಿ. ಇವೆಲ್ಲಕ್ಕಿಂತ ಹೆಚ್ಚಾಗಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಜಾರಿಗೆ ತಂದರೆ ಗಡಿ ಪ್ರದೇಶಗಳಲ್ಲಿನ ಜನ ಹಾಗೂ ಅಲ್ಪಸಂಖ್ಯಾತ ಜನರ ಅಸಮಾಧಾನಕ್ಕೆ ಪಾತ್ರರಾಗಬಹುದೆಂಬ ಕಲ್ಪಿತ ಭಯದಿಂದ ರಾಜಕಾರಣಿಗಳು ಈ ಬಗ್ಗೆ ಸಂಕಲ್ಪ ಮಾಡದೇ ಇದ್ದುದು ಮುಖ್ಯ ಕಾರಣ. ಇವೆಲ್ಲವುಗಳಿಂದ ಹಿಂದೆ ಮೈಸೂರು ಮುಂತಾದ ಕೆಲವು ಪ್ರಾಂತಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಆಡಳಿತ ಭಾಷೆಯಾಗಿದ್ದ ಕನ್ನಡವು, ಏಕೀಕರಣಾನಂತರ ಖಚಿತವಾಗಿಯೂ ಹಿನ್ನಡೆಯನ್ನು ಕಂಡಿತು.

ಅನಂತರ 1963ರಲ್ಲಿ ಅಂಗೀಕರಿಸಿ ಕರ್ನಾಟಕ ರಾಜಭಾಷಾ ಅಧಿನಿಯಮದಲ್ಲಿ "ಕನ್ನಡವು ಕರ್ನಾಟಕ ರಾಜ್ಯದ ರಾಜಭಾಷೆಯಾಗಿ ಇರತಕ್ಕದ್ದು" ಎಂದು ಸ್ಪಷ್ಟವಾಗಿ ಹೇಳಿದ್ದರೂ ಈ ಮೂರು ದಶಕದ ಅವಧಿಯಲ್ಲಿ ಅನುಷ್ಠಾನಗೊಳಿಸಲು ಹೊರಡಿಸಲಾದ ಆಜ್ಞೆ, ಅಧಿಸೂಚನೆ, ಅಧಿಕೃತ ಜ್ಞಾಪನ, ಸುತ್ತೋಲೆ ಇವುಗಳ ಸಂಖ್ಯೆಗೆ ಮಿತಿಯೇ ಇಲ್ಲ. ಯಾವುದೇ ಕೆಲಸವನ್ನು ಜಾರಿ ಮಾಡಲು ಯಾವುದೇ ಸರ್ಕಾರ ಇಷ್ಟು ದೊಡ್ಡ ಪ್ರಮಾಣದಲ್ಲಿ ಆಜ್ಞೆಗಳ ಸರಮಾಲೆ ಹೊರಡಿಸಿರುವುದಿಲ್ಲ. ಅನೇಕಾನೇಕ ಬಾರಿ ಕನ್ನಡವನ್ನು ಸಮಗ್ರವಾಗಿ ಜಾರಿಗೊಳಿಸಲು ಕಾಲಮಿತಿ ಗೊತ್ತುಪಡಿಸಿ ಅಂತಿಮ ಗಡುವು ನೀಡಲಾಗಿದೆ. ಈ ಆದೇಶಗಳನ್ನು ಜಾರಿಗೆ ತರದ ಅಧಿಕಾರಿಗಳ ಮೇಲೆ ಉಗ್ರ ಕ್ರಮ ಕೈಗೊಳ್ಳಲಾಗುವುದೆಂದು ಎಚ್ಚರಿಕೆ ನೀಡಲಾಗಿದೆ. ಇಂತಹ ಗಡುವು, ಎಚ್ಚರಿಕೆಗಳನ್ನು ಮುಂದೆಯೂ ನಿರೀಕ್ಷಿಸಬಹುದು. ಹೀಗೆ ಕುಂಟುತ್ತಾ ಸಾಗಿದ್ದ ಕನ್ನಡ ಅನುಷ್ಠಾನ, ಕಾವಲುಸಮಿತಿ ನೇಮಕದ ನಂತರ ಅದರಲ್ಲೂ ಪಾಟೀಲ ಪುಟ್ಟಪ್ಪನವರು

ಅಧ್ಯಕ್ಷರಾದ ನಂತರ ಓಡುತ್ತಾ ಹೋಗಿ, ಆ ನಂತರ ಬಂದ ರಾಜ್ಯಪಾಲರ ಆಡಳಿತದಲ್ಲಿ ಮಲಗಿಬಿಟ್ಟಿತು. ಸ್ವಾತಂತ್ರ್ಯಾನಂತರದ ನಾಲ್ಕು ದಶಕಗಳಲ್ಲಿ ಸಾಧಿಸಲಾಗಿದ್ದ ಎರಡರಷ್ಟನ್ನು ಪುಟ್ಟಪ್ಪನವರು ನಾಲ್ಕು ವರ್ಷಗಳಲ್ಲಿ ಸಾಧಿಸಿದರು. ಇದು ಮೆಚ್ಚಬೇಕಾದದ್ದೇ. ಆದರೆ ದೃಢಮನಸ್ಕ ಮುಖ್ಯಮಂತ್ರಿಯೊಬ್ಬರು ಕೇವಲ ಎರಡು ತಿಂಗಳಲ್ಲಿ ಇದಕ್ಕಿಂತಲೂ ಹೆಚ್ಚಿನದ್ದನ್ನು ಸಾಧಿಸಬಹುದೆಂಬುದು ತೀರಾ ವಾಸ್ತವ.

ಕನ್ನಡ ಅನುಷ್ಠಾನ ಇಂದೂ ನಿರೀಕ್ಷಿತ ಮಟ್ಟದಲ್ಲಿ ಇಲ್ಲದಿರುವುದಕ್ಕೆ ಕಾರಣಗಳನ್ನು ಪರಿಶೀಲಿಸೋಣ. ಮೊದಲನೆಯದಾಗಿ ಕರ್ನಾಟಕ ಸರ್ಕಾರದ ಚುಕ್ಕಾಣಿ ಹಿಡಿದ ಯಾವೊಬ್ಬ ಮುಖ್ಯಮಂತ್ರಿಯಾಗಲೀ, ಮಂತ್ರಿಯಾಗಲೀ ಇಷ್ಟು ವರ್ಷಗಳ ಕಾಲ ದೃಢಸಂಕಲ್ಪ ಮಾಡದಿರುವುದು. ಮನಸ್ಸಿದ್ದರೆ ಮಾರ್ಗವಿದ್ದೇ ಇರುತ್ತದೆ. ಆದರೆ ಇವರಿಗೆ ಮನಸ್ಸಿಲ್ಲ. ಇತರರ ಒತ್ತಡದಿಂದ ಕೆಲವು ಬಾರಿ ಕೇವಲ ಅಭಿಮಾನದಿಂದ ಆಜ್ಞೆ ಸುತ್ತೋಲೆಗಳನ್ನು ಹೊರಡಿಸಿದರೆ ಮುಗಿಯಿತೆಂದು ತಿಳಿದವರು. ವೃಥಾ ಅಧಿಕಾರಿಗಳ ಮೇಲೆ ಕೂರಿಸಿ ತಮ್ಮ ಜವಾಬ್ದಾರಿ ತೊಳೆದುಕೊಂಡರು. ಸರ್ಕಾರದ ಸಚಿವ ಸಂಪುಟದ ಸದಸ್ಯರೆಲ್ಲ ತಮ್ಮ ಬಳಿಗೆ ಬರುವ ಕಡತದ ಎಲ್ಲಾ ವ್ಯವಹಾರಗಳೂ ಕನ್ನಡದಲ್ಲೇ ಇರಬೇಕೆಂಬ ಕಟ್ಟುನಿಟ್ಟಿನ ಆಜ್ಞೆ ನೀಡಿ, ತಾವು ನೀಡುವ ಆದೇಶ, ಟಿಪ್ಪಣಿ ಇತ್ಯಾದಿಗಳೆಲ್ಲವನ್ನೂ ಕನ್ನಡದಲ್ಲೇ ಬರೆದರೆ ಸರ್ಕಾರದಲ್ಲಿನ ಅಖಿಲ ಭಾರತೀಯ ಸೇವೆಗೊಳಪಟ್ಟ ಅಧಿಕಾರಿಗಳೂ ಸೇರಿದಂತೆ ಯಾವೊಬ್ಬ ಅಧಿಕಾರಿಯೂ ಕನ್ನಡ ಬಿಟ್ಟು ಅನ್ಯಭಾಷೆ ಬಳಸುವ ಧೈರ್ಯ ಮಾಡುವುದಿಲ್ಲ. ಆದರೆ ಅಧಿಕಾರಿಗಳಿಗೆ ಗೊತ್ತಿದೆ, ಮಂತ್ರಿಗಳಿಗೆ ಮನಸಿಲ್ಲವೆಂದು. ತಮ್ಮ ಮೇಲೆ ಆಪಾದನೆ ಹೊರೆಸಿ ತಾವು ನುಣುಚಿಕೊಳ್ಳುತ್ತಾರೆಂದು ಅವರು ಬಲ್ಲರು. ಇದರಿಂದಾಗಿಯೇ ಕಂತೆಗಟ್ಟಲೆ ಹೊರಡಿಸಿದ ಕಟ್ಟುನಿಟ್ಟಿನ ಆದೇಶಗಳಿಗೆ ಯಾವುದೇ ಬೆಲೆ ಇಲ್ಲದಂತಾಗಿರುವುದು.

ಎರಡನೆಯದಾಗಿ ಕನ್ನಡವನ್ನು ಕೆಳಹಂತದಿಂದ ಹಂತ ಹಂತವಾಗಿ ಅನುಷ್ಠಾನಗೊಳಿಸಲು ತೆಗೆದುಕೊಂಡ ತೀರ್ಮಾನ ತಪ್ಪು ಹೆಜ್ಜೆಯಾಗಿದೆ. ಹೋಬಳಿ ಮತ್ತು ತಾಲ್ಲೂಕು ಮಟ್ಟದಿಂದ ಕನ್ನಡವನ್ನು ಜಾರಿಗೊಳಿಸುವ ಪ್ರಯತ್ನ ಇಲಾಖಾಮುಖ್ಯಸ್ಥರ ಮತ್ತು ಸಚಿವಾಲಯದ ಕಚೇರಿಗಳಲ್ಲಿನ ಅಧಿಕಾರಿಗಳಲ್ಲಿ ಕನ್ನಡದ ಬಗ್ಗೆ ಕೀಳರಿಮೆ ಬೆಳೆಸಿತಲ್ಲದೆ, ಇನ್ನೂ ಕನ್ನಡವು ಉನ್ನತ ಮಟ್ಟದಲ್ಲಿ ಆಡಳಿತ ಭಾಷೆಯಾಗುವ ಸಾಮರ್ಥ್ಯ ಪಡೆದಿಲ್ಲವೆಂಬ ಭಾವನೆಯನ್ನು ಹುಟ್ಟುಹಾಕಿತು. ಅಲ್ಲದೆ ಸರ್ಕಾರದಿಂದ ಬರುವ ಆದೇಶ, ಸುತ್ತೋಲೆ ಇತ್ಯಾದಿಗಳು ಇಂಗ್ಲೀಷಿನಲ್ಲಿದ್ದುದರಿಂದ ಇದನ್ನು ಆಧರಿಸಿ ವ್ಯವಹಾರವನ್ನು ಕನ್ನಡದಲ್ಲಿ ಮಾಡುವ ಶ್ರಮ ತೆಗೆದುಕೊಳ್ಳಲು ಇವರು ಸಿದ್ಧರಾಗಿರಲಿಲ್ಲ. ಬದಲಾಗಿ ಸಬೂಬು ಹೇಳಲು ಅವರಿಗೆ ಅವಕಾಶ ಸಿಕ್ಕಂತಾಯಿತು. ಸರ್ಕಾರದ ಹಂತದಲ್ಲೇ ಜಾರಿಮಾಡದ ಕೆಲಸವನ್ನು ತಾವು ಮಾಡಲು ಕೆಳಹಂತದ ಅಧಿಕಾರಿಗಳು ಉದಾಸೀನತೆ ತೋರತೊಡಗಿದರು. ಇದರಿಂದಾಗಿ ಹಂತ ಹಂತವಾಗಿ ಜಾರಿಗೊಳಿಸುವ ಯತ್ನ ಸಾಕಷ್ಟು ಫಲ ನೀಡಲಿಲ್ಲ. ಬದಲಾಗಿ ಒಂದೇ ಬಾರಿ ಸಚಿವಾಲಯದಿಂದ ಗ್ರಾಮ ಲೆಕ್ಕಾಧಿಕಾರಿ ಕಚೇರಿವರೆಗಿನ ಆಡಳಿತವನ್ನೆಲ್ಲಾ ಕನ್ನಡದಲ್ಲೇ ನಡೆಸಬೇಕೆಂಬ ಆದೇಶ ಜಾರಿಗೊಳಿಸಬೇಕಿತ್ತು. ಹಾಗೆ ಮಾಡಿದಾಗ ಉಂಟಾಗುವ ತೊಡಕುಗಳೆಲ್ಲಾ ಕೆಲಸಮಯದಲ್ಲೇ ನಿವಾರಣೆಯಾಗುತ್ತಿದ್ದವು. ಅನವಶ್ಯಕ ಸಂಶಯ ತಪ್ಪು ಹೆಜ್ಜೆ ಇಡುವಂತೆ ಮಾಡಿತು. ಈಗಲೂ ಮಂತ್ರಿಗಳಿಂದ ಬರುವ ಆದೇಶ, ಸಚಿವ ಸಂಪುಟದ ಟಿಪ್ಪಣಿ, ಸಚಿವಾಲಯದಿಂದ ಬರುವ ಆಜ್ಞೆ, ಸುತ್ತೋಲೆಗಳು ಬಹುಪಾಲು ಇಂಗ್ಲೀಷಿನಲ್ಲಿರುವುದರಿಂದ ಕೆಳಹಂತದ ಉತ್ಸಾಹಿ ಅಧಿಕಾರಿಗಳಿಗೆ ಅಡಚಣೆ ಮತ್ತು ಸಂದಿಗ್ಧ ಪರಿಸ್ಥಿತಿಯನ್ನು ತಂದೊಡ್ಡಿದೆ.

ಮೂರನೆಯದಾಗಿ ಕನ್ನಡ ಭಾಷಾಬದ್ಧ ಯಂತ್ರಗಳ ಕೊರತೆ. ಹಿಂದೆ ಕನ್ನಡ ಬೆರಳಚ್ಚು ಯಂತ್ರಗಳ ಪರಿಷ್ಕಾರ ನಡೆಯುವುದು ನಿಧಾನವಾದಾಗ ಉಂಟಾದಂತ ತೊಂದರೆಗಳು ಹೊಸ ಯಂತ್ರಗಳ ಅಭಾವದಿಂದ ಉಂಟಾಗತೊಡಗಿವೆ. ಇಂಗ್ಲೀಷ್ ಬೆರಳಚ್ಚು ಯಂತ್ರಗಳನ್ನು ಹಿಂತೆಗೆದುಕೊಂಡು ಅವುಗಳ ಸ್ಥಾನದಲ್ಲಿ ಕನ್ನಡ ಬೆರಳಚ್ಚು ಯಂತ್ರಗಳನ್ನು ಒದಗಿಸಿದಾಗ ನಿಜಕ್ಕೂ ಕನ್ನಡ ಬಳಕೆಯಲ್ಲಿ ಉನ್ನತ ಸಾಧನೆಯಾಗಿತ್ತು. ಆದರೆ ಇಂದು ಮಾನವಚಾಲಿತ ಬೆರಳಚ್ಚು ಯಂತ್ರಗಳು ಹಳೆಯದಾಗಿದ್ದು, ಆಧುನಿಕ ಕಚೇರಿಗಳಲ್ಲಿ ಎಲೆಕ್ಟ್ರಾನಿಕ್ ಟೈಪ್‌ರೈಟರ್‌ಗಳು, ಪದ ಸಂಯೋಜಕಗಳು (ವರ್ಡ್ ಪ್ರೊಸೆಸರ್), ಕಂಪ್ಯೂಟರ್‌ಗಳು ಅಗತ್ಯವಾಗಿವೆ. ಸರ್ಕಾರದ ಕಚೇರಿಗಳಲ್ಲಿ ಆರ್ಥಿಕ ಮಿತವ್ಯಯದ ಕ್ರಮದಿಂದಾಗಿ ಈ ಯಂತ್ರಗಳು ನಿಧಾನಗತಿಯಲ್ಲಿ ಪ್ರವೇಶಿಸು

ತ್ತಿವೆ. ಆದರೆ ಸಚಿವಾಲಯದ ಮತ್ತು ಇಲಾಖಾ ಮುಖ್ಯಸ್ಥರ ಕಚೇರಿಗಳಲ್ಲಿ ತಮ್ಮ ಅಧೀನದ ನಿಗಮ : ಮಂಡಳಿಗಳ ನೆರವಿನಿಂದ ಇಂತಹ ಯಂತ್ರಗಳನ್ನು ಕೊಳ್ಳುವ ಪರಿಪಾಠ ನಡೆದಿದೆ. ಈ ಆಧುನಿಕ ಯಂತ್ರಗಳಲ್ಲಿ ಕನ್ನಡವನ್ನು ಇನ್ನೂ ಅಳವಡಿಸಿಲ್ಲದಿರುವುದು ಮತ್ತೊಮ್ಮೆ ತೊಂದರೆಗೆ ಸಿಲುಕುವಂತೆ ಮಾಡಿದೆ. ಸರ್ಕಾರವು ಉನ್ನತ ಮಟ್ಟದ ಭಾಷಾಶಾಸ್ತ್ರಜ್ಞರ ಹಾಗೂ ತಂತ್ರಜ್ಞರನ್ನೊಳಗೊಂಡ ಶಾಶ್ವತ ಸಮಿತಿಯೊಂದನ್ನು ಇದಕ್ಕಾಗಿ ರಚಿಸಬೇಕು. ಅದು ಕಾಲ ಕಾಲಕ್ಕೆ ಬರಬಹುದಾದ ಭಾಷಾಬದ್ಧ ಯಂತ್ರಗಳಲ್ಲಿ ಕನ್ನಡವನ್ನು ಅಳವಡಿಸುವ, ಬೆರಳಚ್ಚು ಯಂತ್ರ ಸೇರಿದಂತೆ ಇರುವ ಯಂತ್ರಗಳಲ್ಲಿ ಸುಧಾರಣೆ (ಕೀಬೋರ್ಡ್ ಇತ್ಯಾದಿ) ಮಾಡುವ ಕ್ರಮಗಳನ್ನು ಕೈಗೆತ್ತಿಕೊಳ್ಳಬೇಕು. ಇಂಗ್ಲೀಷ್ ಮತ್ತು ಇತರ ಭಾಷೆಗಳಲ್ಲಿ ತಯಾರಾದ ಯಂತ್ರಗಳಿಗೆ ಕನ್ನಡ ಅಳವಡಿಸುವುದು ಅಷ್ಟೇನೂ ಕಷ್ಟಕರವಾಗಲಾರದು. ಸರ್ಕಾರವು ಕನ್ನಡ ಭಾಷಾಬದ್ಧ ಕಚೇರಿ ಉಪಕರಣಗಳನ್ನು ಕೊಳ್ಳಲು ಯಾವುದೇ ಮಿತವ್ಯಯ ಕ್ರಮಗಳ ನೆಪ ಒಡ್ಡಬಾರದು.

ವಿಧಾನಸೌಧದಲ್ಲಿ ಸರ್ಕಾರ ಬದಲಾದಂತೆಲ್ಲಾ ಆಡಳಿತದಲ್ಲಿ ಕನ್ನಡ ಬಳಕೆ ಪ್ರಮಾಣವೂ ಬದಲಾಗುವುದು ನಾಡಿನ ದುರ್ದೈವ. ಆಡಳಿತದಲ್ಲಿ ಕನ್ನಡ ಅನುಷ್ಠಾನ ಆಡಳಿತಗಾರರ ಮರ್ಜಿಯಿಂದ ಜಾರಿಗೊಳ್ಳುವುದು ಹೋಗಿ ನಾಡಿನ ಜನರ ಹಕ್ಕಾಗಿ ಜಾರಿಗೊಳ್ಳುವ ಕಾಲ ಬರಬೇಕು. ಅಂಥ ಕಾಲ ಬೇಗನೆ ಬರಲೆಂದು ಹಾರೈಸೋಣ.

---

ಮುಖ್ಯವಾದ ಸಂಗತಿ ಎಂದರೆ, ಕನ್ನಡಿಗನಿಗೆ ಭಾಷೆಯ ಅಂಶವಿದ್ದಲ್ಲೆಲ್ಲ ಕನ್ನಡವನ್ನೆ ಬಳಸುವುದು, ಕರ್ನಾಟಕದ ಸಂಸ್ಕೃತಿ ಪರಂಪರೆಯಲ್ಲಿ ಬದುಕುವುದು ತನ್ನ ಮೂಗಿನಲ್ಲೇ ಉಸಿರಾಡುವಷ್ಟು ಸಹಜ, ಅನಿವಾರ್ಯ ಎನಿಸಬೇಕು. ತಾನು ಕನ್ನಡಿಗ ಎಂಬ ಅರಿವು ಅವನ ಕ್ರಿಯಾಶೀಲ ಪ್ರಜ್ಞೆಯ ಕೇಂದ್ರದಲ್ಲಿರಬೇಕು. ಆಗ ಕನ್ನಡ ಭಾಷೆ, ಕನ್ನಡ ನಾಡು ಬೆಳೆಯುತ್ತವೆ, ಕನ್ನಡಿಗನನ್ನು ಬೆಳೆಸುತ್ತವೆ.

**ಎಸ್. ಎಲ್. ಭೈರಪ್ಪ**



# ಮಹಿಳೆಯರು ಮತ್ತು ಕನ್ನಡತನ

**ಎಚ್. ಜಯಮ್ಮ**

ಸ್ವಾತಂತ್ರ್ಯಾನಂತರ ಪ್ರಜಾಪ್ರಭುತ್ವದಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆ 1956 ನವೆಂಬರ್ ಒಂದರಂದು ಅನುಷ್ಠಾನಕ್ಕೆ ತರಲಾಯಿತು. ಅದರಂತೆ ಬಹು ಭಾಷೆಗಳ ರಾಷ್ಟ್ರವಾದ ಭಾರತದಲ್ಲಿ ಎಲ್ಲಾ ಭಾಷೆಗಳಿಗೂ ಸಮಾನತೆ ಇರಬೇಕು. ಕೇಂದ್ರ ಸರ್ಕಾರದ ಕಚೇರಿ ಯಾವ ರಾಜ್ಯದಲ್ಲಿ ಇರುತ್ತದೆಯೋ ಆ ರಾಜ್ಯದ ಭಾಷೆಯನ್ನೇ ಅಲ್ಲಿನ ಆಡಳಿತ ಭಾಷೆಯನ್ನಾಗಿ ಬಳಸಬೇಕು ಮತ್ತು ಕೇಂದ್ರ ಸರ್ಕಾರದ ನೌಕರರು ಆ ರಾಜ್ಯದ ಭಾಷೆಯನ್ನು ಬಲ್ಲವರಾಗಿರಬೇಕು. ಭಾಷಾವಾರು ಪ್ರಾಂತ್ಯಗಳ ರಚನೆಗೆ ಮೊದಲು ಸ್ಪಂದಿಸಿದವರು ಕರ್ನಾಟಕದ ಕನ್ನಡಿಗರು. ಈ ಭಾಷಾಭಿಮಾನ ಕನ್ನಡಿಗರ ಮನಮನೆಯನ್ನು ತುಂಬುವ ಮೊದಲು ನೆರೆ ರಾಜ್ಯದವರು ಎಚ್ಚೆತ್ತು ಸದ್ದುಗದ್ದಲವಿಲ್ಲದೆ ರಾಜ್ಯ ಭಾಷೆಯನ್ನೇ ಆಡಳಿತ ಭಾಷೆಯನ್ನಾಗಿ ಮಾಡಿಕೊಂಡರು.

ಭಾಷಾವಾರು ಪ್ರಾಂತ್ಯಗಳ ರಚನೆಯ ನಿಯಮದಂತೆ ಕರ್ನಾಟಕದಲ್ಲಿ ಕನ್ನಡವೇ ಎಲ್ಲಾ ನಿಟ್ಟಿನಲ್ಲಿಯೂ ಪ್ರಥಮ ಸ್ಥಾನ ಪಡೆದಿರಬೇಕು. ಉಳಿದ ಯಾವ ಭಾಷೆಯಾದರೂ ಎರಡು, ಮೂರನೆ ಸ್ಥಾನದಲ್ಲಿರಬೇಕು. ಕರ್ನಾಟಕ ಸರ್ಕಾರ ಕನ್ನಡ ಭಾಷೆಯಲ್ಲಿ ಆಡಳಿತ ನಡೆಸಬೇಕೆಂಬ ನಿಯಮ ತರುವಲ್ಲಿ ತಡಮಾಡಿದೆ. ಆದೇಶವನ್ನು ನೀಡಿದೆ. ಆದರೆ ಅದು ಕಾರ್ಯರೂಪಕ್ಕೆ ಬಂದಿದೆಯೆ, ಅಧಿಕಾರಿಗಳು ಮಾನ್ಯತೆ ನೀಡುತ್ತಿರುವರೆ ಎನ್ನುವ ಬಗ್ಗೆ ಸರ್ಕಾರ ದೃಢ ನಿಲುವನ್ನು ತಳೆಯಬೇಕಿತ್ತು.

ಇಂಗ್ಲೀಷರು ನಮ್ಮ ದೇಶವನ್ನು ಆಳ್ವಿಕೆ ಮಾಡಿದಾಗ ಅವರ ಆಡಳಿತಕ್ಕೆ ಅಗತ್ಯವಿದ್ದಷ್ಟು ಇಂಗ್ಲೀಷ್ ಕಲಿಸಿದರು. ಆದರೆ ಅದು ಜನಸಾಮಾನ್ಯರ ಭಾಷೆ ಆಗಲು ಸಾಧ್ಯವಿರಲಿಲ್ಲ. ಆದರೆ ಇತ್ತೀಚೆಗೆ ರಾಜಧಾನಿಯಲ್ಲಿ ಮಾತ್ರವಲ್ಲದೆ ಹಳ್ಳಿಹಳ್ಳಿಯಲ್ಲಿಯೂ ಇಂಗ್ಲೀಷಿನ ವ್ಯಾಮೋಹ ಹೆಚ್ಚಿ ತಮ್ಮ ಮಕ್ಕಳನ್ನು ಆಂಗ್ಲ ಭಾಷಾ ಮಾಧ್ಯಮದ ಶಾಲೆಗೆ ಸೇರಿಸಲು ಇರುವ ಆಸ್ತಿಯನ್ನಾದರೂ ಒತ್ತೆಯಿಟ್ಟು ಅಥವಾ ಮಾರಿ ಹೆಚ್ಚಿನ ವಂತಿಕೆ ಕೊಟ್ಟು ಸೇರಿಸುವರು. ಕಡೆಗೆ ಕೂಲಿ ನಾಲಿ ಮಾಡುತ್ತಿರುವವರೂ ಈ ವ್ಯಾಮೋಹಕ್ಕೆ ತೆಕ್ಕೆ ಬಿದ್ದಿರುವುದು ಸುಳ್ಳಲ್ಲ. ತಮ್ಮ ಮಕ್ಕಳು ತಪ್ಪು ತಪ್ಪಾಗಿ ಇಂಗ್ಲೀಷ್‌ನಲ್ಲಿ ಮಾತನಾಡುವುದೇ ದೊಡ್ಡಸ್ತಿಕೆ ಎಂದು ನಂಬುತ್ತಿದ್ದಾರೆ. ನಮ್ಮ ಸರ್ಕಾರವು ಆಂಗ್ಲ ಭಾಷಾ ಮಾಧ್ಯಮದ ಶಾಲೆಗಳ ಸ್ಥಾಪನೆಗೆ ಅನುಮತಿ ನೀಡುತ್ತಲೆ ಇದೆ. ಈ ಶಾಲೆಗಳು ಹೆಚ್ಚಾಗಲು ಕನ್ನಡಿಗರಿಗೆ ಇರುವ ಆಂಗ್ಲ ಭಾಷೆಯ ಅಂಧಾಭಿಮಾನ ಮತ್ತು ಕನ್ನಡದ ಬಗೆಗಿರುವ ನಿರ್ಲಕ್ಷ್ಯ, ನಿರಭಿಮಾನ ಕಾರಣ.

ಸರ್ಕಾರದ ಆಡಳಿತದಲ್ಲಿ, ವ್ಯವಹಾರದಲ್ಲಿ ಕಡ್ಡಾಯವಾಗಿ ಕನ್ನಡ ಮಾಧ್ಯಮ ಜಾರಿಗೆ ಬಂದಲ್ಲಿ ಕನ್ನಡದ ಉಳಿವು ಸಾಧ್ಯ, ತಪ್ಪಿದರೆ ಕನ್ನಡ ನುಡಿಯ ಏಳಿಗೆ ಖಂಡಿತಾ ಸಾಧ್ಯವಿಲ್ಲ. ಮೊತ್ತಮೊದಲು ಕನ್ನಡಿಗರು ತಮ್ಮ ತಾಯಿಯ ಮೇಲೆ ಅಂದರೆ ತಮ್ಮ ಮಾತೃಭಾಷೆಯ ಮೇಲೆ ಅಭಿಮಾನ ಬೆಳೆಸಿಕೊಂಡಾಗ ಮಾತ್ರ ಹಿಡಿತ ಸಾಧ್ಯವಾಗುತ್ತದೆ.

ರಾಜ್ಯ ಸರ್ಕಾರದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಮಹಿಳೆಯರು ಉದ್ಯೋಗಿಗಳಾಗಿ ಇದ್ದಾರೆ. ಅವರು ಮನಃಪೂರ್ವಕವಾಗಿ ಕನ್ನಡದಲ್ಲಿಯೆ ತಮ್ಮ ಪಾಲಿನ ಕರ್ತವ್ಯ ನಿರ್ವಹಿಸುತ್ತೇವೆ ಎನ್ನುವ ಹಠ ತೊಟ್ಟರೆ ಭಾಷೆ ಬೆಳೆಯುವುದರಲ್ಲಿ ಅಚ್ಚರಿ ಇಲ್ಲ.

ಕರ್ನಾಟಕದ ರಾಜಧಾನಿ ಉದ್ಯಾನ ನಗರಿ ಎನ್ನುವ ಹೆಸರಿನ ಜೊತೆ ಜೊತೆಯಲ್ಲಿಯೆ ಕೈಗಾರಿಕೆಗಳ ಬೃಹದ್ ಕೇಂದ್ರವಾಗಿ ಬೆಳೆದಿದೆ. ಇಲ್ಲಿ ದೇಶದ ಎಲ್ಲಾ ಭಾಗಗಳಿಂದ ಬೇರೆ ಬೇರೆ ಭಾಷಿಕರು ಉದ್ಯೋಗ, ವ್ಯಾಪಾರ ಇತ್ಯಾದಿ ಅನುಕೂಲಗಳನ್ನು ಹುಡುಕಿಕೊಂಡು ವಲಸೆ ಬಂದು ಸೇರಿರುವರು. ಹಾಗೆ ಬಂದವರು ಯಾವ ರಾಜ್ಯದವರೇ ಆಗಿರಲಿ ಅಲ್ಲಿನ ಭಾಷೆಯನ್ನು ಕಲಿತು ತಮಿಳು ಕನ್ನಡಿಗರು, ತೆಲಗು ಕನ್ನಡಿಗರು, ಮರಾಠಿ ಕನ್ನಡಿಗರೆಂದು ಬೆರೆತು ಬಾಳಬೇಕು. ಹಾಗೆ ಪರಿವರ್ತನೆ ಮಾಡಿಕೊಳ್ಳಬೇಕಾದ್ದು ಕನ್ನಡಿಗರಾದ ನಮ್ಮ ಆದ್ಯ ಕರ್ತವ್ಯ. ಅವರಿಗೆ ಭಾಷೆ ತಿಳಿಯದೆಂದು ಅವರ ಭಾಷೆಯಲ್ಲಿಯೆ ಅವರೊಡನೆ ವ್ಯವಹರಿಸಲು ಮೊದಲು ಮಾಡಿದರೆ ಅವರಿಗೆ ಇಲ್ಲಿಯ ಭಾಷೆ ಕಲಿಯುವ ಅಗತ್ಯವೇ ಕಂಡುಬರುವುದಿಲ್ಲ. ಇದಕ್ಕೆ ನನ್ನ ಕಣ್ಣೆದುರಿಗೆ ನಡೆದ ಒಂದು ಘಟನೆಯನ್ನು ಉದಾಹರಿಸಬೇಕಾಗುತ್ತದೆ. ಕೆಲವು ದಿನಗಳ ಹಿಂದೆ ನಾನು ನನ್ನ ಗೆಳತಿ ಜಯನಗರದಲ್ಲಿ ಹೋಗುತ್ತಿದ್ದಾಗ ಎದುರಿನಿಂದ ಬಂದವರೊಬ್ಬರು ತಮಿಳಿನಲ್ಲಿ ಕೆಲವು ಮಾಹಿತಿ ಕೇಳಿದಾಗ ಇವಳು ತಪ್ಪಾದ ತಮಿಳಿನಲ್ಲಿಯೆ ಅವರು ಕೇಳಿದ ಮಾಹಿತಿ ನೀಡಿದಳು. ನನ್ನ ಮನದಲ್ಲಿ ಕನ್ನಡತನ ಜಾಗೃತವಾಗಿ ಗೆಳತಿಗೆ ಅವಳು ಮಾಡಿದ ತಪ್ಪನ್ನು ತೋರಿಸಿದಾಗ ಹೇಳಿದ ಮಾತು "ಕನ್ನಡದಲ್ಲಿಯೆ ವಿವರಿಸಿದರೆ ಅವರಿಗೆ ತಿಳಿಯುವ ಬಗೆ ಹೇಗೆ ?" ಎಂದಾಗ ದಿಗ್ಮೂಢಳಾಗಿ ನಿಂತೆ. ಇದು ಕನ್ನಡಿಗರ ಕನ್ನಡದ ಬಗೆಗಿರುವ ನಿರಭಿಮಾನದ ಸೌಜನ್ಯದ ಪ್ರತೀಕವೆನಿಸದೇ ?

ಅದೇ ನಾವು ತಮಿಳುನಾಡಿನಲ್ಲಿ, ಕೇರಳದಲ್ಲಿ ಪ್ರವಾಸ ಮಾಡುತ್ತಿದ್ದಾಗ ನಮಗೆ ಸಿಕ್ಕ ಉತ್ತರ ಅವರ ಮಾತೃಭಾಷೆಗಳಲ್ಲಿ. ಎಷ್ಟೇ ಪ್ರಯತ್ನಿಸಿದರು ಸಹ ಅವರಿಂದ ನಮಗೆ ಬೇಕಾಗ ಪದವನ್ನು ಅವರ ಬಾಯಿಂದ ಹೊರಡಿಸಲಾರದೆ ಸೋತ ಪ್ರಸಂಗ ನನ್ನದು. ಹಾಗೆ ಹಲವರದು ಇರಬಹುದು. ಅಲ್ಲಿನ ಕನ್ನಡಿಗರು ಕನ್ನಡದಲ್ಲಿ ವ್ಯವಹರಿಸಿದ್ದು ತಿಳದುಬಂದರೆ ಅವರಿಗೆ ನೀಡಿದ್ದ ವ್ಯಾಪಾರ ವಹಿವಾಟಿನ ಸೌಲಭ್ಯಕ್ಕೆ ಕತ್ತರಿ. ಇದನ್ನು ನೋಡಿದಾಗ ನೆರೆ ರಾಜ್ಯದವರ ಮಾತೃಭಾಷಾ ವ್ಯಾಮೋಹವನ್ನು,, ಅಭಿಮಾನವನ್ನು ತೋರಿಸುತ್ತದೆ. ಅಂತಹವರನ್ನು ನೋಡಿಯಾದರು ಕನ್ನಡಿಗರು ಸ್ವಾಭಿಮಾನಿಗಳಾಗುವುದನ್ನು ಕಲಿಯಬೇಕು. ತಮಿಳು ನಾಡಿನವರು ಯಾವ ಒತ್ತಡಕ್ಕೂ ಮಣಿಯದೆ ಕೇಂದ್ರ ಸರ್ಕಾರದ ಹಿಂದಿ ಹೇರಿಕೆಯನ್ನು ಒಟ್ಟಾಗಿ ತಿರಸ್ಕರಿಸಿ ದೂರದರ್ಶನದ ಸ್ವಾಯತ್ತತೆಯನ್ನು ಉಳಿಸಿಕೊಂಡರು. ಹಾಗೆಂದು ನಾವು ಸಂಕುಚಿತ ಮನೋಭಾವನೆ ಬೆಳೆಸಿಕೊಳ್ಳಬೇಕೆಂದು ಅಲ್ಲ. ಆದರೆ ನಮ್ಮ ತಾಯ್ನುಡಿಗೆ ಮೊದಲು ಗೌರವ, ಪ್ರೀತಿ ಮತ್ತು ರಕ್ಷೆಯನ್ನು ಕೊಟ್ಟು ಅನಂತರ ಬೇರೆಯವರ ತಾಯ್ನುಡಿಗೆ ನಮಸ್ಕರಿಸೋಣ.

ಬೆಂಗಳೂರು ನಗರ ಒಂದು ಮಿನಿ ಭಾರತ. ಇಲ್ಲಿ ಎಲ್ಲಾ ಭಾಷೆಯ ಜನರು ವಾಸ ಮಾಡುತ್ತಿರುವುದರಿಂದ ಕನ್ನಡವನ್ನು ಒತ್ತಾಯಪೂರ್ವಕವಾಗಿ ಹೇರುವುದು ಸರಿಯಲ್ಲ. ಕನ್ನಡಿಗರು ಶೇಕಡಾ 30 ರಷ್ಟು ಮಾತ್ರ ಇದ್ದಾರೆ. ಆದ್ದರಿಂದ ಇಂಗ್ಲೀಷ್‌ನ ಅವಶ್ಯಕತೆ ಇದೆ ಮತ್ತು ಕೇಂದ್ರಾಡಳಿತ ಪ್ರದೇಶ ಮಾಡಬೇಕೆಂದು ಕೆಲವರ ಅಭಿಪ್ರಾಯ. ಈಗಾಗಲೆ ಒಂದು ಕಡೆ ಕೇರಳದವರು ಒಂದು ಕಡೆ ತಮಿಳು ನಾಡಿನವರು, ಮತ್ತೊಂದು ಕಡೆ ತೆಲುಗರು ಮಗದೊಂದು ಕಡೆ ಮರಾಠರು ಕನ್ನಡದ ನೆಲ ಜಲವನ್ನು ಕಬಳಿಸಿರುವರು. ಹೀಗಿರುವಾಗ ಇಂತಹವರ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟು ತೆಪ್ಪಗಿದ್ದರೆ ತಮಿಳರು ಮರಾಠಿಗರು ಸೀಮೋಲ್ಲಂಘನೆ ಮಾಡಿ ಲಾಲ್‌ಬಾಗ್ ಗುಡ್ಡದ ಮೇಲೆ ತಮ್ಮಗಳ ಬಾವುಟ ಹಾರಿಸುತ್ತಾರೆ. ಈ ಪ್ರಶ್ನೆಯನ್ನು ಮೇಲಿನ ಮನೋಭಾವನೆಯ ಜನರಿಗೆ ಹಾಕಿದಾಗ ಅವರಿಂದ ಉತ್ತರವಿಲ್ಲ. ನಾವು ಇಂಗ್ಲೀಷಿನ ಅಥವಾ ಇನ್ನಾವುದೇ ಭಾಷೆಗಳ ದ್ವೇಷಿಗಳಲ್ಲ. ಆದರೆ ಕನ್ನಡದ ಕಟ್ಟಾಭಿಮಾನಿಗಳಾಗುವುದು ತಪ್ಪೆ ? ಇಂದು ಮುಂಬಯಿಯಲ್ಲಿ ದಕ್ಷಿಣ ಕನ್ನಡದವರು ಶೆಟ್ಟಿ ಎಂದು ಹೇಳಿಕೊಳ್ಳಲು ಅಂಜುತ್ತಾರೆ. ತಮಿಳರು ಬೆಂಗಳೂರು ದಂಡು ಪ್ರದೇಶವನ್ನು ತಮಿಳು ನಾಡೆಂದೇ ತಿಳಿದು ಬದುಕುತ್ತಿದ್ದಾರೆ. ಇಲ್ಲಿಯೆ ಹುಟ್ಟಿ, ಇಲ್ಲಿಯೆ ಬೆಳೆದ ಎಷ್ಟೋ ಇತರ ಭಾಷೀಯರು ಕನ್ನಡಿಗರೊಂದಿಗೆ ಬೆರೆಯಲು ಇಚ್ಛಿಸುತ್ತಿಲ್ಲ. ಇದಕ್ಕೆ ಕಾರಣ ನಮ್ಮ ಸೌಜನ್ಯದ ದುರುಪಯೋಗ ಮತ್ತು ಕನ್ನಡಿಗರ ನಿರಭಿಮಾನದ, ನಿರ್ಲಕ್ಷ್ಯದ ಕುರುಹು.

ಮೇಲಿನ ಎಲ್ಲ ನಿರಭಿಮಾನಕ್ಕೆ ಕೈಗನ್ನಡಿ ಇಂದಿನ ನಮ್ಮ ಮಕ್ಕಳ ವಿದ್ಯಾಭ್ಯಾಸ. ಮನೆಯೆ ಮೊದಲ ಪಾಠಶಾಲೆ, ಮಾತೃದೇವೋಭವ, ತೊಟ್ಟಿಲು ತೂಗುವ ಕೈ ಕತ್ತಿಯನ್ನು ಹಿಡಿಯಬಲ್ಲದು ಎನ್ನುವ ನಾಣ್ನುಡಿಯಂತೆ ಮಹಿಳೆಯರು ಮೊದಲು ಎಚ್ಚೆತ್ತುಕೊಳ್ಳಬೇಕು.

ಕನ್ನಡದ ಬಳಕೆಗೆ ಮೊದಲ ಮೆಟ್ಟಿಲು ಮನೆ. ಏಕೆಂದರೆ ಮನೆ ಭಾಷೆಯನ್ನು ಮಾತೃಭಾಷೆಯೆಂದು ಕರೆಯುವುದು ಸರ್ವೇ ಸಾಮಾನ್ಯ. ಇದಕ್ಕೆ ಕಾರಣ ತಾಯಿಯ ಜೊತೆ ಮಗು ಹೆಚ್ಚು ಕಾಲ ಕಳೆಯುವುದರೊಂದಿಗೆ ತೊದಲು ನುಡಿಯಿಂದ ಮಾತನಾಡಲು ಪ್ರಾರಂಭಿಸುತ್ತದೆ. ಆದುದ ರಿಂದ ಪ್ರತಿ ಗೃಹಿಣಿಯು ತಮ್ಮ ಮಾತೃಭಾಷೆಯ ಬಗ್ಗೆ ಆಸೆ ಆಸಕ್ತಿ ತೋರುವುದರ ಜೊತೆ ಅದರ ಪ್ರಯೋಗ ವನ್ನು ಮನೆಯಲ್ಲಿ ಮಾಡಬೇಕು. ತಾಯಂದಿರು ಕನ್ನಡ ಮರೆತು ಆಂಗ್ಲ ಭಾಷೆಯ ವ್ಯಾಮೋಹದಿಂದ ಆಂಗ್ಲ ಭಾಷೆಯ ಶಾಲೆಗಳಿಗೆ ಕಳಿಸುವುದು, ಮಕ್ಕಳ ಜೊತೆ ಆಂಗ್ಲ ಭಾಷೆಯಲ್ಲಿಯೆ ಮಾತನಾಡುವುದು ತುಂಬಾ ಶೋಚನೀಯ. ಹೀಗೆ ಮಾತೆಯರು ಅವಜ್ಞೆಯಿಂದ ಕಂಡಾಗ ಮಾತೃಭಾಷೆಯ ಗತಿ ಏನು? ಪರಭಾಷೆಯನ್ನು ದ್ವೇಷಿಸು ಎಂದಲ್ಲ ಆದರೆ ಮಾತೃಭಾಷೆಯ ಮೇಲೆ ಪ್ರೀತಿ, ಗೌರವ, ಅಭಿಮಾನ, ಮಮತೆ ಅಗತ್ಯ. ಕನ್ನಡ ನಾಡಿನ ಸಂಸ್ಕೃತಿ, ಪರಂಪರೆ, ಇತಿಹಾಸ, ಪುರಾಣಗಳ ಬಗ್ಗೆ ಶಾಲೆಗಳಲ್ಲಿ ಸರಳ ಕನ್ನಡದಲ್ಲಿ ಸುಲಭ ವಾಕ್ಯಗಳಲ್ಲಿ ಬೋಧಿಸುವ ಪಠ್ಯ ಪುಸ್ತಕಗಳನ್ನು ರೂಪಿಸಲು ಸರ್ಕಾರ ಕ್ರಮ ತೆಗೆದುಕೊಳ್ಳಬೇಕು. ಪುಟ್ಟ ಮಕ್ಕಳ ಮನದಲ್ಲಿ ಅಚ್ಚಳಿಯದಂತೆ ಉಳಿಸಬೇಕಾದರೆ ಬಣ್ಣಬಣ್ಣದ ಚಿತ್ರ ಗಳನ್ನು ಶಾಲೆಗಳಲ್ಲಿ ತೋರಿಸುವ ಮೂಲಕ ಮಕ್ಕಳ ಮನವನ್ನು ಗೆದ್ದರೆ ಮುಂದಿನ ಜನಾಂಗದಲ್ಲಿ ಕನ್ನಡತನ ವನ್ನು ಬೆಳೆಸಿದಂತೆ ಆಗುತ್ತದೆ. ಅದಕ್ಕೆ ಮಹಿಳೆಯರು, (ಉಪಾಧ್ಯಾಯಿನಿ) ತಂದೆ ತಾಯಿಯರು ಅದಕ್ಕೆ ಪೂರಕ ವಾಗಿ ಸರ್ಕಾರವು ಅಗತ್ಯ ಕ್ರಮಗಳನ್ನು ತೆಗೆದುಕೊಂಡು ಕನ್ನಡವನ್ನು ಬೆಳೆಸಲು ಕನ್ನಡ ಕೆಲಸಕ್ಕೆ ತೊಡಗಿಸಿ ಕೊಳ್ಳಲು ಸೂಕ್ತ ಮಾರ್ಗದರ್ಶನ, ಮೇಲ್ಪಂಕ್ತಿ ಹಾಕು ವುದು ಅಗತ್ಯವಾಗಿದೆ.

---

ಸರ್ಕಾರ, ಅಧಿಕಾರಿಗಳು ಎಂದೂ ಎಚ್ಚರಗೊಳ್ಳುವುದಿಲ್ಲ. ಜನತೆ ಮಲಗಿರುವಾಗ ಅವರ ಸ್ಥಾನ, ಸಂಬಳ, ಸಾರಿಗೆ, ಮೇಲು ಸಂಪಾದನೆ, ಎಲ್ಲ ಸುರಕ್ಷಿತ. ಜನತೆ ಎಚ್ಚರಿ ಗೊಂಡು ಕೈಯಲ್ಲಿ ಚಾಟಿ ಹಿಡಿದಾಗ ಎಲ್ಲರೂ ಜಾಗೃತರಾಗುತ್ತಾರೆ. ಕನ್ನಡದ ಹಲವು ಸಮಸ್ಯೆಗಳ ಪರಿಹಾರ ಕನ್ನಡ ಯಶಸ್ವಿಯಾಗಿ ಆಡಳಿತ ಭಾಷೆಯಾಗುವುದರಲ್ಲಿದೆ. ಅದರ ಬೆನ್ನಲ್ಲೇ ಕನ್ನಡವು ಶಿಕ್ಷಣ ಮಾಧ್ಯಮವಾಗಬೇಕು. ಸದ್ಯದಲ್ಲಿ ಕರ್ನಾಟಕ ಅನ್ಯಭಾಷಿಕರ ವಸಾಹತುವಿನಂತಿದೆ. ಕನ್ನಡ ಆಡಳಿತದಲ್ಲಿ ಶಿಕ್ಷಣದಲ್ಲಿ ಸರ್ವಮಾನ್ಯವಾಗಿ ಬೆಳೆಗದೆ ನಿಜವಾದ ಕರ್ನಾಟಕವನ್ನು ಕಾಣಲಾರೆವು.

**ಎಂ. ಚಿದಾನಂದಮೂರ್ತಿ**

# ಕಂಡು ಕೇಳಿದ 'ಕನ್ನಡ ಚಳವಳಿ'ಗಳು (1956-82)

**ರಾ. ನಂ. ಚಂದ್ರಶೇಖರ**

15588

"ಕನ್ನಡ ಚಳವಳಿ" ಒಂದು ಪ್ರತ್ಯೇಕ ಆಂದೋಲನವಾಗಿ ಬೆಳೆದದ್ದು ಕರ್ನಾಟಕ ಏಕೀಕರಣದ ನಂತರವೆ. ಕರ್ನಾಟಕ ಏಕೀಕರಣಕ್ಕೆ ದೊಡ್ಡ ಆಂದೋಲನವೇನೋ ನಡೆಯಿತು, ಅದರಲ್ಲಿ ವಿಭಿನ್ನ ನಿಲುವುಳ್ಳ ರಾಜಕೀಯ ಪಕ್ಷಗಳು, ವ್ಯಕ್ತಿಗಳು ಪಾಲ್ಗೊಂಡಿದ್ದರು. ಏಕೀಕರಣವೊಂದೆ ಅವರ ಗುರಿಯಾಗಿತ್ತು. ಏಕೀಕರಣದ ಬಳಿಕ ಕನ್ನಡಿಗರ ಎಲ್ಲ ಸಮಸ್ಯೆಗಳೂ ಬಗೆಹರಿಯುವುದೆಂದು ಭಾವಿಸಿದ್ದರು. ಈ ನಂಬಿಕೆಗಳು ಹುಸಿಯಾಗಲು ಬಹಳ ಕಾಲ ಬೇಕಾಗಲಿಲ್ಲ. ತನ್ನ ನಾಡಿನಲ್ಲಿಯೇ ಪರಕೀಯನಾಗಿ, ಅತಂತ್ರನಾಗಿ ಬದುಕಬೇಕಾದ ಪರಿಸ್ಥಿತಿ ಕನ್ನಡಿಗನಿಗೆ ಬಂದೊದಗಿತು. ಜಾಗೃತರಾಗಿದ್ದ ಕನ್ನಡಿಗರು ಈ ಸ್ಥಿತಿಯ ವಿರುದ್ಧ ಪ್ರತಿಕ್ರಿಯಿಸ ತೊಡಗಿದರು. ಡಾ॥ ಮೊ.ಅ. ಅಶೋಕ್ ಅವರು ಅಂದಿನ ಜಾಗೃತ ಕನ್ನಡಿಗರ ಭಾವನೆಗಳನ್ನು ಹೀಗೆ ಹೇಳುತ್ತಾರೆ. "ಕನ್ನಡ ನಾಡು–ನುಡಿಯ ವಿಚಾರದಲ್ಲಿ ಇಂದು ಎಂದಿಗಿಂತ ಹೆಚ್ಚು ವಿಚಾರ ಮಾಡಬೇಕಿದೆ. ಏಕೆಂದರೆ ಕರ್ನಾಟಕ ಏಕೀಕರಣದ ನಂತರ ಕನ್ನಡಿಗರ ಎಲ್ಲ ಸಮಸ್ಯೆಗಳೂ ಬಗೆಹರಿಯುವವು ಎಂದು ತಿಳಿದುಕೊಂಡವರಿಗೆ ಭಾರಿ ನಿರಾಶೆಯಾಗಿದೆ! ಕರ್ನಾಟಕ ಏಕೀಕರಣದ ಬಗ್ಗೆ ನಮ್ಮ ರಾಜಕಾರಣಿಗಳ ಉದ್ದೇಶವೇನಿತ್ತು ಎಂಬುದು ಈಗಿನ ಕಚ್ಚಾಟದಿಂದ ಸ್ಪಷ್ಟವಾಗುತ್ತದೆ. ಕೇವಲ ತಮ್ಮ ವೈಯಕ್ತಿಕ ಸ್ವಾರ್ಥಕ್ಕಾಗಿ ರಾಜಕಾರಣಿಗಳು ಕರ್ನಾಟಕದ ಏಕೀಕರಣ ಬಯಸಿರಬೇಕೆಂದು."

ಇವರೇ ನಿರ್ಲಿಪ್ತ ಕನ್ನಡಿಗರನ್ನು ಕುರಿತು ಅಂದಿನ ಕನ್ನಡಿಗರು ಗಂಭೀರಚಿತ್ತರ್, ಸುಘಟರ್ಕಳ್, ಸುಪ್ರಭುಗಳ್, ಅಭಿಮಾನಿಗಳ್ ಆಗಿದ್ದರೆ ಇಂದಿನ ಕನ್ನಡಿಗರು ನಿರಭಿಮಾನಿಗಳ್, ನಿರ್ವೀಯರ್ ಆಗಿರುವರಷ್ಟೆ ಅಲ್ಲ ತಮ್ಮ "ತಿಳಿಗೇಡಿತನ" ಹಾಗೂ "ಮೂರ್ಖತನ"ಗಳಿಗೆ "ಔದಾರ್ಯ"ವೆಂಬ ದೊಡ್ಡ ಹೆಸರನಿಟ್ಟುಕೊಂಡಿದ್ದಾರೆ. ರಾಷ್ಟ್ರೀಯತೆಯ ನೆಪದಲ್ಲಿ ರಾಜಕಾರಣಿಗಳಿಂದಲೂ, ಕೇಂದ್ರ ಸರಕಾರದಿಂದಲೂ "ಕರ್ನಾಟಕದ ದರೋಡೆ" ಹಾಡುಹಗಲೇ ನಡೆಯುತ್ತಿದೆ. ಭಾರತ ಒಕ್ಕೂಟ ಸರ್ಕಾರದಲ್ಲಿ ಕರ್ನಾಟಕಕ್ಕೆ ಏನಾದರೂ ಮಂಜೂರಾಗಿದ್ದರೆ-ಆಗುತ್ತಿದ್ದರೆ ಅದು "ಅನ್ಯಾಯ"ದ ಹೊರತು ಮತ್ತೇನಲ್ಲ! ಕರ್ನಾಟಕಕ್ಕೆ ಸ್ವಾತಂತ್ರ್ಯ ಬಂದಮೇಲೆ ಲಾಭಕ್ಕಿಂತ ಹಾನಿಯೇ ಹೆಚ್ಚಾಗಿದೆ. ಏಕೆಂದರೆ ಕರ್ನಾಟಕವು ಕೇಂದ್ರ ಸರ್ಕಾರದ ಮಲತಾಯಿ ಧೋರಣೆಯಿಂದ ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಕ್ಷೀಣವಾಗುತ್ತ ಹೊರಟಿದೆ" ಎಂದು 30 ವರ್ಷಗಳ ಹಿಂದೆ ಬರೆದಿದ್ದಾರೆ. ಪರಿಸ್ಥಿತಿ ಇಂದೂ ಹಾಗೇ ಇದೆ.

ಬೆಂಗಳೂರು ಕರ್ನಾಟಕದ ರಾಜಧಾನಿ. ಇಲ್ಲಿ ಕನ್ನಡಿಗ ಅಂದಿಗೂ-ಇಂದಿಗೂ ಅಲ್ಪಸಂಖ್ಯಾತ. ಇಲ್ಲಿ ಇರುವ ಕಾರ್ಖಾನೆಗಳಲ್ಲಿ ಕನ್ನಡಿಗರನ್ನು ಬಿಟ್ಟು ಬೇರೆ ಎಲ್ಲರಿಗೂ ಅವಕಾಶವಿದೆ. 1960 ರಲ್ಲಿ ಸ್ಥಿತಿ ಇನ್ನೂ ಕೆಟ್ಟದಾಗಿತ್ತಂತೆ. ಇಂದು ಕನ್ನಡಿಗರು 40% ರಷ್ಟಾದರೂ ಇದ್ದಾರೆ. ಅಂದು ಕನ್ನಡಿಗರ ಸಂಖ್ಯೆ ¼ ಭಾಗಕ್ಕಿಂತ ಅಲ್ಪ. ಕೇಂದ್ರೋದ್ಯಮಗಳಲ್ಲಿ ತಮಿಳರ ಹಾವಳಿ ಸಹಿಸುವುದೇ ಕಷ್ಟವಾದ ಪರಿಸ್ಥಿತಿ. 1960 ರಲ್ಲಿ ಭಾರತೀಯ ದೂರವಾಣಿ ಕಾರ್ಖಾನೆಗಳಲ್ಲಿ ತಮಿಳರು ಕನ್ನಡಿಗರನ್ನು ಅವಮಾನ ಮಾಡಲು ಪ್ರಾರಂಭಿಸಿದರು. ಕೆಲವು

ಉತ್ಸಾಹಿ ಕನ್ನಡ ಕಾರ್ಮಿಕರು ಕಾರ್ಖಾನೆಯ ಹತ್ತಿರದ ಊರುಗಳ ಜನರ ಸಹಕಾರ ಪಡೆದು, ನೇರ ಹೋರಾಟ ನಡೆಸಿದರು. ಈ ಹೋರಾಟ ನಗರದ ಇತರ ಕಾರ್ಖಾನೆಗಳಲ್ಲಿರುವ ಕನ್ನಡಿಗರಿಗೆ ಸ್ಫೂರ್ತಿ ನೀಡಿದ್ದಲ್ಲದೆ-ದೂರವಾಣಿ ಕಾರ್ಖಾನೆಯಲ್ಲಿ ಕನ್ನಡದ ಸ್ಥಿತಿ ಸುಧಾರಿಸಲು ನೆರವಾಯಿತು.

ರಾಮನವಮಿ, ಗಣೇಶೋತ್ಸವ ಮುಂತಾದ ಕಾರ್ಯಕ್ರಮಗಳಲ್ಲಿ ಕನ್ನಡ ಕಲಾವಿದರಿಗೆ ಅವಕಾಶಗಳು ದುರ್ಲಭವಾಗಿದ್ದವು. ಕಾರ್ಖಾನೆಗಳಲ್ಲಿ ಕನ್ನಡಿಗರಿಗೆ ಅವಕಾಶವೇ ಇಲ್ಲ. ಕಾರ್ಖಾನೆಗಳ ವಸತಿ ಪ್ರದೇಶ ಮತ್ತು ಕೆಲವು ಬಡಾವಣೆಗಳಲ್ಲಿ ತಮಿಳರ ಅಟ್ಟಹಾಸಕ್ಕೆ ಮಿತಿಯೆ ಇಲ್ಲ. ಚುಡಾಯಿಸುವುದು ಎನ್ನುವುದು ಪ್ರಾರಂಭವಾದದ್ದೆ ತಮಿಳರಿಂದ ಎಂದು ಅಂದು ಹೋರಾಡಿದ ಮಿತ್ರರು ಹೇಳುತ್ತಾರೆ. ಇಲ್ಲಿನ ಉತ್ಸಾಹಿ ಕನ್ನಡ ಯುವಕರು ಕನ್ನಡ ಸಂಘಗಳನ್ನು ಸ್ಥಾಪಿಸಿ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಇದಕ್ಕೂ ವಲಸಿಗರ ಕಿರುಕುಳ. ಇವರ ವಿರುದ್ಧ ಬೆಂಗಳೂರಿನಲ್ಲಿ ಕನ್ನಡ ಯುವಕರು ಹೋರಾಟ ನಡೆಸುತ್ತಲೇ ಇದ್ದರು. ಇವುಗಳನ್ನೆಲ್ಲ ಗಂಭೀರವಾಗಿ ಗಮನಿಸುತ್ತಿದ್ದ ಅ.ನ.ಕೃ, ಕೋಣಂದೂರು ಲಿಂಗಪ್ಪ, ಮ. ರಾಮಮೂರ್ತಿ, ಕೆ.ಜಿ. ಮಹೇಶ್ವರಪ್ಪ, ಎಂ.ಎಸ್. ನಟರಾಜ್, ಮನ್ಮಪಾಟೀಲ್ ಮುಂತಾದವರು ಯುವ ಶಕ್ತಿಯನ್ನು ಒಂದು ವೇದಿಕೆಯಡಿ ತರುವ ಆಶಯದಿಂದ 1960 ರಲ್ಲಿ "ಕನ್ನಡ ಯುವಜನ ಸಭೆ" ಎಂಬ ಸಂಘಟನೆಯನ್ನು ಸ್ಥಾಪಿಸಿದರು. ಅ.ನ.ಕೃ. ಅಧ್ಯಕ್ಷರಾಗಿಯೂ, ಕೋಣಂದೂರು ಲಿಂಗಪ್ಪ ಕಾರ್ಯದರ್ಶಿಯಾಗಿಯೂ, ರಾಮಮೂರ್ತಿಯಂತಹವರು ಸಮಿತಿಯ ಸದಸ್ಯರಾಗಿ ಈ ಸಂಘಟನೆಯಲ್ಲಿದ್ದರು.

1962 ಫೆಬ್ರುವರಿ 4 ರಂದು ನಡೆದ ಬೆಂಗಳೂರು ಕನ್ನಡಿಗರ ಸಮ್ಮೇಳನದಲ್ಲಿ "ಕನ್ನಡ ಯುವಜನ" ಪತ್ರಿಕೆಯು ಬಿಡುಗಡೆಯಾಯಿತು. ಮ. ರಾಮಮೂರ್ತಿ ಇದರ ಸಂಪಾದಕರಾಗಿದ್ದರು. ಈ ಪತ್ರಿಕೆ ಕನ್ನಡ ಕಾರ್ಯಕರ್ತರ ನಡುವೆ ಸಂಪರ್ಕ ಸೇತುವಾಗಿತ್ತು. ಅದೇ ವರ್ಷ 27-5-1962ರಂದು ಚಾಮರಾಜಪೇಟೆ ರಾಮ ಸೇವಾ ಮಂಡಳಿ ಎದುರು ಕನ್ನಡ ಕಲಾವಿದರಿಗೆ ಮತ್ತು ಕನ್ನಡ ಗೇಯ ಕೃತಿಗಳಿಗೆ ಆದ್ಯತೆಯಿರಬೇಕೆಂದು ಒತ್ತಾಯಿಸಿ ಅ.ನ.ಕೃ. ಮತ್ತು ಮ. ರಾಮಮೂರ್ತಿಯವರ ನೇತೃತ್ವದಲ್ಲಿ ಪ್ರತಿಭಟನಾ ಮೆರವಣಿಗೆ ನಡೆಯಿತು. ಚಪ್ಪರದ ಹತ್ತಿರ ಬಂದಾಗ ಗಲಾಟೆ ಆಯಿತು. ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿ ಅವರ ಕಚೇರಿ ಅರ್ಧಕ್ಕೆ ನಿಂತಿತು. ಈ ಘಟನೆಯನ್ನು ಪತ್ರಿಕೆಯವರು ಅಣ್ಣ-ತಮ್ಮಂದಿರ ಜಗಳ ಎಂದು ಬರೆದರು. ಅ.ನ.ಕೃ. ಅಣ್ಣ ಅ.ನ. ರಾಮರಾವ್ "ರಾಮ ಸೇವಾ ಸಮಿತಿ"ಯ ಕಾರ್ಯದರ್ಶಿಯಾಗಿದ್ದೇ ಅದಕ್ಕೆ ಕಾರಣ. ಪತ್ರಿಕೆಗಳ ಅಭಿಪ್ರಾಯ ಏನೇ ಇರಲಿ, ಇದು ಕನ್ನಡ ಕಾರ್ಯಕರ್ತರಿಗೆ ಮಹತ್ವದ ಘಟನೆ. ಕನ್ನಡದ ಕಳಕಳಿಗೆ ಚಳವಳಿ ರೂಪ ನೀಡಿದ ದಿನ. ಅಂದು ಭುಗಿಲೆದ್ದ ಚಳವಳಿ ಹಲವು ರೂಪಗಳನ್ನು ತಾಳಿತು ಎಂದು ಎಸ್. ನಾಗರಾಜ್ ಹೇಳಿದರೆ, ಈ ಘಟನೆಯ ಮಾರನೇದಿನ ಗಾಂಧಿಬಜಾರ್‌ನಲ್ಲಿ ನಡೆದ ಭಾರಿ ಜನಸ್ತೋಮದ ಸಭೆಯ ಮುಂದೆ ಅ.ನ.ಕೃ. ಭಾಷಣ ಮಾಡಿದ್ದೇ ನಮಗೆ ಮೊದಲ ಕನ್ನಡ ದೀಕ್ಷೆಯಾಯಿತು, ನಮ್ಮ ನರನಾಡಿಗಳಲ್ಲಿ ಕನ್ನಡಪ್ರೇಮ ಉಕ್ಕಿ ಹರಿಯಿತು ಎಂದು ಬಿ.ಸಿ. ಜಯರಾಂ ಹೇಳುತ್ತಾರೆ. "ಕನ್ನಡ ಜಾಗೃತ ಪರಿಷತ್" ಎಂಬ ಸಂಸ್ಥೆಯ ಹೆಸರಿನಲ್ಲಿ ವ್ಯವಸ್ಥಿತವಾಗಿ ಪ್ರತಿ ಮೂರು ತಿಂಗಳಿಗೊಂದರಂತೆ ಕನ್ನಡ ಜಾಗೃತಪತ್ರ ತರುತ್ತಿದ್ದ ಐಟಿಐ ಉದ್ಯೋಗಿ ಎಂ. ನಾಗರಾಜ್ ಈ ಪ್ರತಿಭಟನೆ ಇಡೀ ಕನ್ನಡ ನಾಡಿನ ಜನತೆಯ ಕಣ್ಣು ತೆರೆಸಿದ್ದು ಮಾತ್ರವಲ್ಲದೆ, ಕನ್ನಡಿಗರು ನಿದ್ರಿಸುತ್ತಿಲ್ಲ ಎಂಬುದನ್ನು ಇಡೀ ಭಾರತದಲ್ಲಿ ಪ್ರತಿಧ್ವನಿಸುವಂತೆ ಮಾಡಿತು ಎನ್ನುತ್ತಾರೆ. ಎಂ. ನಾಗರಾಜ್ ಅವರ ಪತ್ರಗಳೇ ನಮಗೆ ಅಂದಿನ ಚಳವಳಿ ಬಗ್ಗೆ ದೊರಕುವ ಮುದ್ರಿತ ಮಾಹಿತಿಗಳು. ಇವರು ಇನ್ನೂ ಹೆಚ್ಚು ಮಾಹಿತಿಗಳನ್ನು ಜನರಿಗೆ ತಲುಪಿಸುವ ಉದ್ದೇಶದಿಂದ "ಧ್ರುವ" ಎಂಬ ಮಾಸಪತ್ರಿಕೆ ಪ್ರಾರಂಭಿಸಿದರು. ಆ ಪತ್ರಿಕೆ ನಷ್ಟ ಅನುಭವಿಸಿದ್ದರಿಂದ ಸಾಲ ವಾಯಿತು. ಸಾಲ ತೀರಿಸಲಾರದೆ ಆತ್ಮಹತ್ಯೆ ಮಾಡಿಕೊಂಡರಂತೆ. ಇಂತಹ ಸಾಮಾನ್ಯರ ಅಸಾಮಾನ್ಯ ತ್ಯಾಗ, ಸೇವೆ ಯಾರ ಗಮನಕ್ಕೂ ಬರುವುದಿಲ್ಲ. ಇದು ಚರಿತ್ರೆಯ ಬಹುದೊಡ್ಡ ಕ್ರೌರ್ಯ.

ರಾಮೋತ್ಸವದ ಪ್ರತಿಭಟನೆಯಂದು ಯಾರೋ ಕಿಡಿಗೇಡಿಗಳು ಚಪ್ಪರದ ಒಂದು ಮೂಲೆಗೆ ಬೆಂಕಿ ಹಚ್ಚಿದರು, ಪೋಲೀಸರು ಕನ್ನಡ ಕಾರ್ಯಕರ್ತರನ್ನು ಥಳಿಸಿದರು. ಸಿಕ್ಕಿದವರನ್ನು ಹಿಡಿದು ಮೊಕದ್ದಮೆ ಹೂಡಿದರು. ಹೀಗಾಗಿ ಕನ್ನಡದ ಕಾರ್ಯಕರ್ತರು

ಆಗಾಗ ಭೇಟಿ ಮಾಡಲು ಅವಕಾಶವಾಯಿತು. ಇದು ಬೆಂಗಳೂರಿನ ಕನ್ನಡ ಪರ ಸಂಸ್ಥೆ/ವ್ಯಕ್ತಿಗಳು ಒಂದುಗೂಡಲು ಸಹಾಯಕವಾಯಿತು. ಸುಮಾರು ಅರವತ್ತು ಸಂಘಗಳು ಒಟ್ಟುಗೂಡಿ 'ಕರ್ನಾಟಕ ಸಂಯುಕ್ತ ರಂಗ' ಎಂಬ ವೇದಿಕೆಯಡಿಯಲ್ಲಿ ಕನ್ನಡ-ಕನ್ನಡಿಗ-ಕರ್ನಾಟಕಗಳ ಹಿತರಕ್ಷಿಸಲು ಕಾರ್ಯಪ್ರವೃತ್ತರಾದರು. ಮ. ರಾಮಮೂರ್ತಿ ಇದರ ಪ್ರಧಾನ ಕಾರ್ಯದರ್ಶಿಯಾದರು. ಅ.ನ.ಕೃ ಕೋಣಂದೂರು, ಲಿಂಗಪ್ಪ ಬೀಚಿ, ತ.ರಾ.ಸು., ತಿ.ತಾ. ಶರ್ಮ, ನಾಡಿಗೇರ ಕೃಷ್ಣರಾವ್ ಹೀಗೆ ಹಲವು ಗಣ್ಯರು ಸೇರಿ ಕನ್ನಡ ಚಳುವಳಿಗೆ ಹೊಸ ಆಯಾಮ ನೀಡಲು ಕಾರ್ಯಪ್ರವೃತ್ತರಾದರು. ವಿಶೇಷವಾಗಿ ಅ.ನ.ಕೃ. ತಮ್ಮ ಅಮೋಘ ವಾಕ್ ಚಾತುರ್ಯದಿಂದ ಕನ್ನಡಿಗರು ಜಾಗೃತರಾಗುವಂತೆ ಮಾಡಿದರು. ಯಾರೇ ಆಗಲಿ ಧ್ವನಿವರ್ಧಕ ವ್ಯವಸ್ಥೆ ಮಾಡಿದರೆ ಅ.ನ.ಕೃ. ಮ. ರಾಮಮೂರ್ತಿ ಮುಂತಾದವರು ತಮ್ಮ ಸ್ವಂತ ಖರ್ಚಿನಲ್ಲಿ ಹೋಗಿ ಭಾಷಣ ಮಾಡುಮಾಡುತ್ತಿದ್ದರು. ಕೆಲವು ದಿನ ಎರಡು-ಮೂರು ಸಭೆಯಲ್ಲಿ ಮಾಷಣ ಮಾಡಬೇಕಾಗಿ ಬರುತ್ತಿತ್ತು. 'ಸಂಯುಕ್ತ ರಂಗದ' ಆಶ್ರಯದಲ್ಲಿ ಒಂದಲ್ಲ ಒಂದು ಕಡೆ ಪ್ರತಿದಿನ ಸಭೆ ನಡೆಯುತ್ತಿತ್ತು. ಈ ಸಭೆಗಳಲ್ಲಿ ಪಾಲ್ಗೊಳ್ಳುತ್ತಿದ್ದ ಏಕೈಕ ಹಿರಿಯ ರಾಜಕಾರಣಿ ಅಂದಾನಪ್ಪ ದೊಡ್ಡಮೇಟಿ ಎಲ್ಲರ ಗೌರವಕ್ಕೆ ಪಾತ್ರರಾಗಿದ್ದರು.

1962 ಕನ್ನಡ ಜಾಗೃತಿ ದೃಷ್ಟಿಯಿಂದ ಅತ್ಯಂತ ಮಹತ್ವವಾದದ್ದು. ಕರ್ನಾಟಕ ಏಕೀಕರಣವಾದ ನವೆಂಬರ್ 1ನ್ನು "ಕನ್ನಡ ರಾಜ್ಯೋತ್ಸವ" ಎಂಬ ಹೆಸರಿನಿಂದ ಸುಭಾಶ್ ನಗರದ ಧರ್ಮಾಂಬುಧಿ ಕೆರೆಯ ಆವರಣದಲ್ಲಿ 'ಕರ್ನಾಟಕ ಸಂಯುಕ್ತ ರಂಗ'ದವರು ಆಚರಿಸಿದರು. ಈ ಉತ್ಸವದ ಮುಖ್ಯ ಆಶಯ ಕನ್ನಡಿಗರ ಸ್ವಾಭಿಮಾನವನ್ನು ಉದ್ದೀಪನಗೊಳಿಸಿ ಕನ್ನಡ ಸಂಘಟನೆಯನ್ನು ಸದೃಢವಾಗಿ ಮಾಡುವುದು. ಇಂದು ನಡೆಯುತ್ತಿರುವ ರಾಜ್ಯೋತ್ಸವಗಳಿಗೆ ಪೂರ್ಣ ಭಿನ್ನವಾಗಿ ಸ್ವಾತಂತ್ರ್ಯೋತ್ಸವದ ಮಾದರಿಯಲ್ಲಿ ಆಚರಿಸಲಾಯಿ. ಕನ್ನಡ ಕಾರ್ಯಕರ್ತರ ಶಿಸ್ತುಬದ್ಧ ಮೆರವಣಿಗೆ ಎಲ್ಲರ ಗಮನ ಸೆಳೆದಿದ್ದಲ್ಲದೆ, ಮೆಚ್ಚುಗೆಯನ್ನೂ ಗಳಿಸಿತ್ತು. ರಾಜ್ಯ ಸರ್ಕಾರ ರಜಾದಿನವಾಗಿ ಘೋಷಿಸಿತು. ಕನ್ನಡಿಗರು ಮೈಚಳಿ ಬಿಟ್ಟು ಸಹಸ್ರ ಸಂಖ್ಯೆಯಲ್ಲಿ ಪಾಲ್ಗೊಳ್ಳತೊಡಗಿದರು. ಇದರ ನೇರ ಪರಿಣಾಮ ಚಿತ್ರರಂಗದ ಮೇಲಾಯಿತು.

ರಾಜ್ಯೋತ್ಸವದ ಆಚರಣೆಯ ಪರಿಣಾಮವಾಗಿ ಬೆಂಗಳೂರಿನ ಬಹುತೇಕ ಚಿತ್ರಮಂದಿರಗಳು ನವೆಂಬರ್ ಮೊದಲವಾರ ಕನ್ನಡ ಚಿತ್ರ ಪ್ರದರ್ಶಿಸಲು ಪ್ರಾರಂಭಿಸಿದವು. ಇದು ಪಾಟಾಳ ನಾಗರಾಜ್‌ರ ಸಾಧನೆ.

ಡಬ್ಬಿಂಗ್ ಚಿತ್ರಗಳ ವಿರುದ್ಧ ಚಳವಳಿ ನಡೆಯಿತು. ಕನ್ನಡ ಚಿತ್ರರಂಗದ ಅಭಿವೃದ್ಧಿಗೆ ಕಂಟಕವಾಗಿದ್ದ ಡಬ್ಬಿಂಗ್ ಚಿತ್ರಗಳನ್ನು ನಿಲ್ಲಿಸುವಲ್ಲಿ ಚಳವಳಿ ಪೂರ್ಣ ಯಶ ಸಾಧಿಸಿತು. ಚಳವಳಿ ನಾಯಕರು ಕೇವಲ ಕನ್ನಡ ಚಿತ್ರಗಳನ್ನೇ ನೋಡುವಂತೆ ಕೊಟ್ಟ ಕರೆ ಪರಿಣಾಮ ಬೀರಿತು. ಕನ್ನಡ ಚಿತ್ರಗಳ ಪ್ರೇಕ್ಷಕರ ಸಂಖ್ಯೆ ಹೆಚ್ಚಾಯಿತು. ವರ್ಷಕ್ಕೆ 4-5 ಚಿತ್ರಗಳು ಬರುತ್ತಿದ್ದುದು ಹೋಗಿ 15-50 ಚಿತ್ರಗಳು ಬರಲು ಪ್ರಾರಂಭವಾದವು. ಗುಣಮಟ್ಟವು ಸುಧಾರಿಸುವ ಭಾವನೆ ಮೂಡಿತು. ಕರ್ನಾಟಕದಲ್ಲಿ ಚಿತ್ರ ತಯಾರಿಸಲು ಸೌಲಭ್ಯವಿಲ್ಲದ್ದರಿಂದ ಮದರಾಸ್‌ನಲ್ಲಿಯೇ ಕನ್ನಡ ಚಿತ್ರಗಳ ತಯಾರಾಗುತ್ತಿದ್ದವು. ಅವುಗಳಲ್ಲಿ ಬಹಳಷ್ಟು ಅನುವಾದ ಚಿತ್ರಗಳು ಕನ್ನಡದ ಸೊಗಡು ಅಲ್ಲಿ ಎಲ್ಲೂ ಕಾಣುತ್ತಿರಲಿಲ್ಲ. ಇದನ್ನು ಗಮನಿಸಿದ ಚಳುವಳಿಗಾರರು "ಇತ್ತೀಚಿನ ಚಳುವಳಿಯಿಂದ ಕನ್ನಡಿಗರು ಹೆಚ್ಚು ಹೆಚ್ಚು ಕನ್ನಡ ಚಿತ್ರವನ್ನು ನೋಡುತ್ತಿರುವುದು ಅಭಿಮಾನದ ಸಂಗತಿ. ಆದರೆ ಕನ್ನಡಿಗರ ಅಭಿಮಾನದ ದುರ್ಲಾಭವನ್ನು ಇಂದು ಅನೇಕ ಚಿತ್ರೋದ್ಯಮಿಗಳು ಪಡೆಯುತ್ತಿರುವುದು ದುರ್ದೈವದ ಸಂಗತಿ. ಕೇವಲ ಭಾಷೆ ಕನ್ನಡವಾದರೆ ಸಾಲದು, ಚಿತ್ರಗಳಲ್ಲಿ ಕನ್ನಡ ಪರಿಸರ, ಸಂಸ್ಕೃತಿಗಳನ್ನು ಪ್ರತಿಬಿಂಬಿಸಬೇಕು, ಇಲ್ಲದಿದ್ದರೆ ಕಳಪೆ ಚಿತ್ರಗಳನ್ನು ಬಹಿಷ್ಕರಿಸಬೇಕಾಗುತ್ತದೆ" ಎಂದು ಎಚ್ಚರಿಸಿದರು. ಅನಂತರ ಕೆಲವು ಉತ್ತಮ ಚಿತ್ರಗಳು ಬಂದವು. ಇಂದಿಗೂ ಕನ್ನಡ ಸೊಗಡುಳ್ಳ ಚಿತ್ರಗಳು ಬರುತ್ತಿರುವುದು ಕಡಿಮೆ ಎನ್ನುವುದು ಖೇದದ ಸಂಗತಿ.

1964ರಲ್ಲಿ 'ಕಾಂಚಿ ತಲೈವನ್' ಎಂಬ ತಮಿಳು ಚಿತ್ರ ಬಿಡುಗಡೆಯಾಯಿತು. ಆ ಚಿತ್ರದಲ್ಲಿ ತಮಿಳುನಾಡಿನ ರಾಜ ಪುಲಿಕೇಶಿಯನ್ನು ಸೋಲಿಸಿ ಕರ್ನಾಟಕದ ಬಾವುಟವನ್ನು ತುಳಿಯುವ ಪ್ರಸಂಗವಿತ್ತು. ಇದು ಚರಿತ್ರೆಗೆ (ಸತ್ಯಕ್ಕೆ) ಎಸಗಿದ ದೊಡ್ಡ ದ್ರೋಹವೆಂದು ಅ.ನ.ಕೃ.

ಅದನ್ನು ಪ್ರತಿಭಟಿಸಲು ಕನ್ನಡಿಗರಿಗೆ ಕರೆ ಕೊಟ್ಟರು. ಈ ಚಿತ್ರವನ್ನು ಪ್ರದರ್ಶಿಸುತ್ತಿದ್ದ ಚಿತ್ರಮಂದಿರಗಳ ಮುಂದೆ ಪ್ರತಿಭಟಿಸಲು ತೀರ್ಮಾನವಾಯಿತು. ಈ ಪ್ರತಿಭಟನೆಗೆ ಮಣಿದ ನಿರ್ಮಾಪಕರು ಆಕ್ಷೇಪಾರ್ಹ ಭಾಗಗಳನ್ನು ತೆಗೆದುಹಾಕುವುದಾಗಿ ಹೇಳಿ, ಅವುಗಳನ್ನು ನಿರ್ಧರಿಸಲು ಚಳವಳಿಗಾರರು, ಇತಿಹಾಸ ತಜ್ಞರು ಮುಂತಾದವರಿಗೆ ಬೆಂಗಳೂರಿನ ಮಿನರ್ವ ಚಿತ್ರಮಂದಿರ ದಲ್ಲಿ ವಿಶೇಷ ಪ್ರದರ್ಶನ ಏರ್ಪಡಿಸಿದರು. ಚಿತ್ರದಲ್ಲಿನ ಕನ್ನಡ ಅವಹೇಳನ ದೃಶ್ಯಗಳನ್ನು ಕಂಡು ಕೆರಳಿದ ಕಾರ್ಯ ಕರ್ತರು ಚಿತ್ರಮಂದಿರದ ಆಸನಗಳನ್ನು ಹರಿದರು. ಇದು ಅ.ನ.ಕೃ. ಅವರಿಗೆ ಸರಿಕಾಣಲಿಲ್ಲ. ರಾಮಮೂರ್ತಿ ಭಾವೋದ್ವೇಗದಲ್ಲಿ ಇಂತಹ ಘಟನೆಗಳು ಜರುಗುತ್ತವೆ ಎಂದು ಸಮರ್ಥಿಸಿದರು. ಈ ಘಟನೆಯಿಂದ ಅ.ನ.ಕೃ. ಸಕ್ರಿಯ ಚಳವಳಿಯಿಂದ ದೂರ ಸರಿದರು. ಚಳವಳಿಯ ಪೂರ್ಣ ಹೊಣೆ ರಾಮಮೂರ್ತಿಯವರ ಹೆಗಲಿಗೆ ಬಿತ್ತು.

ಪಕ್ಕದ ತಮಿಳು ನಾಡಿನಲ್ಲಿ ಡಿ.ಎಂ.ಕೆ. ಪಕ್ಷ ಜನ ಸಾಮಾನ್ಯರನ್ನು ತಲುಪಲು ಚಲನಚಿತ್ರ ಕಲಾವಿದರನ್ನು ಬಳಸಿಕೊಂಡಿತು. ವಿಶೇಷವಾಗಿ ಎಂ.ಜಿ.ಆರ್. ತಮ್ಮ ಚಿತ್ರಗಳಲ್ಲಿ ತಮಿಳರನ್ನು ಜಾಗೃತಿಗೊಳಿಸುವ ದೃಶ್ಯಗಳನ್ನು ಅಳವಡಿಸುತ್ತಿದ್ದರು. ಬಹುತೇಕ ಚಿತ್ರಸಾಹಿತಿಗಳು ತಮಿಳರಲ್ಲಿ ಅಭಿಮಾನ ಮೂಡಿಸುವ ಸಂಭಾಷಣೆ ಸೇರಿಸು ತ್ತಿದ್ದರು. ಒಟ್ಟಿನಲ್ಲಿ ಡಿ.ಎಂ.ಕೆ. ಜನಪ್ರಿಯಗೊಳ್ಳುವಲ್ಲಿ ತಮಿಳು ಚಿತ್ರರಂಗದ ಕೊಡುಗೆ ಅಪಾರ. ಅನಕ್ಷರಸ್ಥರ ಸಂಖ್ಯೆ ಹೆಚ್ಚಿರುವ ನಮ್ಮಲ್ಲಿ ಲೇಖನಿ ಖಡ್ಗಕ್ಕಿಂತ ಹರಿತ ವಾಗಲು ಸಾಧ್ಯವಿಲ್ಲ ಎಂಬ ಕಟುಸತ್ಯವನ್ನರಿತ ಕನ್ನಡ ಚಳವಳಿ ನಾಯಕರು ಚಿತ್ರನಟರನ್ನು ಮನವೊಲಿಸಲು ಪ್ರಯತ್ನಿಸಿದರು. ಆದರೆ ಅದು ಪೂರ್ಣ ಫಲ ನೀಡಲಿಲ್ಲ. ಕೆಲವು ಕಲಾವಿದರು ಚಳವಳಿಯ ವೇದಿಕೆಯ ಮೇಲೆ ಬಂದರು. ಆದರೆ ಅದರ ಪರಿಣಾಮ ನಿರೀಕ್ಷಿಸಿದಷ್ಟು ಆಗಲಿಲ್ಲ. ಕಾರಣ ಪ್ರಮುಖ ನಟರು ಆಸಕ್ತಿ ವಹಿಸದಿದ್ದುದು. ಆದರೂ ಕನ್ನಡ ಚಳವಳಿ ಮತ್ತು ಚಿತ್ರರಂಗಕ್ಕೆ ಬಿಡಿಸಲಾಗದ ನಂಟು. ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರ ಪ್ರದರ್ಶನಕ್ಕೆ ಒತ್ತಾಯ ಹಾಕುತ್ತ, ಕನ್ನಡ ಚಿತ್ರಗಳನ್ನೇ ನೋಡುವಂತೆ ಮನವಿ ಮಾಡಿಕೊಂಡ ಕನ್ನಡ ಚಳವಳಿಯೇ ಕಾರಣ ; ಆದರೆ, ಚಿತ್ರರಂಗದಿಂದ ನಿರೀಕ್ಷಿತ ಬೆಂಬಲ ದೊರೆಯಲಿಲ್ಲವೆಂಬ ಕೊರಗು 'ಕನ್ನಡ ಚಳವಳಿ' ನಾಯಕರನ್ನು ಕಾಡುತ್ತಿತ್ತು.

ಭದ್ರಾವತಿಯಲ್ಲಿ ಚಳವಳಿಗಾರರು ಸೂಚಿಸಿದ ದೃಶ್ಯಗಳನ್ನು ತೆಗೆದು ಹಾಕದೆ, ಮೊದಲಿನಂತೆಯೇ 'ಕಾಂಚಿತಲೈವನ್' ಚಿತ್ರವನ್ನು ಪ್ರದರ್ಶಿಸುತ್ತಿರುವುದು ರಾಮಮೂರ್ತಿಯವರ ಗಮನಕ್ಕೆ ಬಂದಿತು. ತಕ್ಷಣ ರಾಮಮೂರ್ತಿ ಪೋಲೀಸರಿಗೆ ತಿಳಿಸಿ ಚಿತ್ರಪ್ರದರ್ಶನ ನಿಲ್ಲಿಸಲು ಕೋರಿದರು. ಪೋಲಿಸರು ಸಹಕರಿಸಲಿಲ್ಲ. ಚಳವಳಿಗಾರರು ಭದ್ರಾವತಿಗೆ ಹೊರಟರು. ಇವರಿಗೆ ಭದ್ರಾವತಿ ಪ್ರವೇಶಿಸಲು ಅವಕಾಶವಾಗದಂತೆ 'ನಿಷೇಧಾಜ್ಞೆ' ಜಾರಿಮಾಡಿದರು. ಈ ಆಜ್ಞೆಯನ್ನು ಧಿಕ್ಕರಿಸಿ ರಾಮಮೂರ್ತಿ ನಾಯಕತ್ವದಲ್ಲಿ ಮೆರವಣಿಗೆ ಹೊರಟಿತು. ಪಲಸಿಗರು ಕಲ್ಲು ತೂರಿದರು. ಗಲಾಟೆ ಪ್ರಾರಂಭವಾಗಿ ಪೋಲೀಸರು ಲಾಟಿ, ಅಶ್ರುವಾಯು ಗಳನ್ನು ಬಳಸಿದರು. ಈ ಘಟನೆ ಚಳವಳಿ ಬೆಂಗಳೂರಿ ನಿಂದ ಬೇರೆಡೆಗೆ ಹರಡಲು ಸಹಕಾರಿಯಾಯಿತು.

ಇದೇ ಸಂದರ್ಭದಲ್ಲಿ ನಡೆದ ಇನ್ನೊಂದು ಪ್ರಮುಖ ಘಟನೆ ಕನ್ನಡ ಚಳವಳಿಗೆ ಹೊಸ ಆಯಾಮ ನೀಡಿತು. ತಮಿಳರ ಪ್ರಾಬಲ್ಯವಿದ್ದ ಚಿತ್ರದುರ್ಗ ಜಿಲ್ಲೆಯ ಹಿರಿಯೂರಿಗೆ ಅಲ್ಲಿನ ಕನ್ನಡಾಭಿಮಾನಿಗಳು ಶ್ರೀ ರಾಮ ಮೂರ್ತಿಯವರನ್ನು ಕರೆಸಿ ಬಹಿರಂಗ ಸಭೆ ಏರ್ಪಡಿ ಸಿದರು. ಅಲ್ಲಿನ ಪುರಸಭೆ ಡಿ. ಎಂ. ಕೆ. ವಶದಲ್ಲಿತ್ತು. ಹಿರಿಯೂರಿನ ಪ್ರಮುಖ ವೃತ್ತದಲ್ಲಿ ತಮಿಳು ಧ್ವಜ ಹಾರಾಡುತ್ತಿತ್ತು. ಸಭೆಯಲ್ಲಿ ಭಾಗವಹಿಸಲು ಹೋಗಿದ್ದ ರಾಮಮೂರ್ತಿಯವರಿಗೆ ಇದು ಸಹ್ಯವಾಗಲಿಲ್ಲ. ಸಭೆ ಯಲ್ಲಿ ಮಾತನಾಡುತ್ತ ಸಭಿಕರಿಗೆ ಧ್ವಜವನ್ನು ಕೆಳಗಿಳಿಸಲು ಕರೆಯಿತ್ತರು. ಸಭೆ ಮುಗಿದರೂ ಧ್ವಜ ಕೆಳಗಿಳಿಯಲಿಲ್ಲ, ಅನಂತರ ರಾಮಮೂರ್ತಿ ಪಂಚೆಯನ್ನು ಎತ್ತಿಕಟ್ಟಿ ಧ್ವಜ ದೆಡೆಗೆ ನಡೆದರಂತೆ, ಅಷ್ಟರಲ್ಲಿ ಗುಂಪಿನಲ್ಲಿದ್ದ ಒಬ್ಬ ಯುವಕ ಕಂಬ ಹತ್ತಿ ಬಾವುಟ ಕೆಳಗಿಳಿಸಿದನಂತೆ. ಇಂತಹ ಪ್ರಕರಣಗಳು ರಾಮಮೂರ್ತಿಯವರಿಗೆ ವೀರಸೇನಾನಿ ಎಂಬ ಬಿರುದು ತಂದು ಕೊಟ್ಟವು.

ತಮಿಳರು ಹೆಚ್ಚಿರುವ ಸ್ಥಳಗಳಲ್ಲಿ ಡಿ. ಎಂ. ಕೆ. ಬಾವುಟಗಳು ಹಾರಾಡುತ್ತಿದ್ದವು. ಇವು ಕನ್ನಡ ಕಾರ್ಯ ಕರ್ತರಿಗೆ ಕಿರಿಕಿರಿ ಉಂಟು ಮಾಡಿದ್ದವು. ಈ ಬಾವುಟದ ಹಾವಳಿ ತಡೆಯಲು, ಪ್ರತಿಯಾಗಿ ಕನ್ನಡ ಬಾವುಟ ರೂಪಿಸಲು ಚಳವಳಿಗಾರರು ಒಂದು ಕನ್ನಡ ಕಾರ್ಯ ಕರ್ತರ ಸಭೆ ಕರೆದರು. ಮ. ರಾಮಮೂರ್ತಿ, ಬೆ. ನಿ. ಈಶ್ವರಪ್ಪ ಮುಂತಾದವರು ಸೂಚಿಸಿದ ಅರಿಸಿನ ಕೆಂಪು

ಬಣ್ಣದ ಬಾವುಟವನ್ನು 'ಕನ್ನಡ ಬಾವುಟ'ವಾಗಿ ಸಭೆ ಸ್ವೀಕರಿಸಿತು. ಈ ಧ್ವಜ ಕನ್ನಡ ಕಾರ್ಯಕರ್ತರಿಗೆ ವಿಶೇಷ ಸ್ಫೂರ್ತಿ ನೀಡಿತಲ್ಲದೆ ಕ್ಷಿಪ್ರವಾಗಿ ಜನಪ್ರಿಯವಾಯಿತು. ತಮಿಳು ಬಾವುಟ ಇಳಿಸಿ ಕನ್ನಡ ಬಾವುಟ ಹಾರಿಸುವುದು ಅಂದಿನ ಯುವಕರಿಗೆ ವಿಶೇಷ ಆಕರ್ಷಣೆಯಾಗಿತ್ತು ಎನ್ನುವ ಮಹದೇವರಾವ್ ಈ ವಿಷಯದಲ್ಲಿ ಪೋಲೀಸರ ಸಹಕಾರವನ್ನು ನೆನೆಯುತ್ತಾರೆ.

ಕರ್ನಾಟಕ ಸಂಯುಕ್ತ ರಂಗವು ರಾಜ್ಯ ಮತ್ತು ಕೇಂದ್ರ ಸರಕಾರಗಳ ಗಮನ ಸೆಳೆಯಲು ಒಂದು ಬೃಹತ್ ಮೆರವಣಿಗೆ ನಡೆಸಿತು. ಆ ಮೆರವಣಿಗೆಯನಂತರ ನಾಗಪ್ಪ ಪಾರ್ಕಿನಲ್ಲಿ ಸಾರ್ವಜನಿಕ ಸಭೆ ನಡೆಯಿತು. ಆ ಸಭೆಯಲ್ಲಿ 5 ಸಾವಿರಕ್ಕೂ ಹೆಚ್ಚು ಜನ ಭಾಗವಹಿಸಿದ್ದರೆಂದು ಬೆ. ರಾ. ನಾಗರಾಜ ಹೇಳುತ್ತಾರೆ.

ಈ ಸಭೆ ಕನ್ನಡ ಚಳವಳಿಗೆ ಹೊಸ ಆಯಾಮ ಕೊಡುತ್ತದೆಂದು ಭಾವಿಸಿದ್ದ ಕನ್ನಡಾಭಿಮಾನಿಗಳಿಗೆ ದೊಡ್ಡ ಆಘಾತ ಕಾದಿತ್ತು. ಮೆರವಣಿಗೆಯ ಮುಂಚೂಣಿಯಲ್ಲಿದ್ದು ವೇದಿಕೆಯಿಂದ ಸಭೆಯನ್ನುದ್ದೇಶಿಸಿ ಮಾತನಾಡಿದ ಶ್ರೀ ವಾಟಾಳ್ ನಾಗರಾಜ್ ಮಾರನೆಯ ದಿನ ಪತ್ರಿಕೆಗಳಲ್ಲಿ ತಮಗೂ ಕನ್ನಡ ಸಂಯುಕ್ತ ರಂಗಕ್ಕೂ ಯಾವುದೇ ಸಂಬಂಧವಿಲ್ಲವೆಂದೂ ಕನ್ನಡ ಚಳವಳಿಯನ್ನು ಉಗ್ರರೂಪದಲ್ಲಿ ನಡೆಸುವುದಾಗಿಯೂ ಹೇಳಿಕೆ ನೀಡಿದ್ದರು. ವಾಟಾಳರ ನಿಲುವನ್ನು ಬದಲಿಸುವಂತೆ ರಾಮಮೂರ್ತಿ ಮನವಿ ಮಾಡಿದರು. ವಾಟಾಳ್ ನಾಗರಾಜ್ ಅವರು ಒಪ್ಪಲಿಲ್ಲ. ಮ. ರಾಮಮೂರ್ತಿಯವರು ಗುಬ್ಬಿರಂಗ ಮಂದಿರದಲ್ಲಿ "ರಾಜ್ಯೋತ್ಸವ"ದ ಬಗ್ಗೆ ಸಮಾಲೋಚನಾ ಸಭೆ ಕರೆದಿದ್ದರು. ವಾಟಾಳ್ ನಾಗರಾಜ್ ಅವರು ರಾಜ್ಯೋತ್ಸವವನ್ನು ಬೇರೆಯಾಗಿ ಆಚರಿಸುವುದಾಗಿ ತಿಳಿಸಿದರು. ಮನವಿಗೆ ಮಣಿಯದ ಅವರು ಮೈಸೂರು ಬ್ಯಾಂಕ್ ವೃತ್ತದ ಸಮೀಪ 'ನೃಪತುಂಗ ಮಂಟಪ' ವೆಂಬ ವೇದಿಕೆಯಲ್ಲಿ ರಾಜ್ಯೋತ್ಸವ ಆಚರಿಸತೊಡಗಿದರು. ಈ ಘಟನೆ ಕನ್ನಡ ಕಾರ್ಯಕರ್ತರಲ್ಲಿ ಬಿರುಕು ಮೂಡಲು ಕಾರಣವಾಯಿತು. ಇಲ್ಲಿಂದ ಮುಂದೆ ಚಳವಳಿಯಲ್ಲಿ ಜಾತಿಯ ಅಂಶವೂ ನುಸುಳಿತು.

ಬೆಂಗಳೂರಿನ ಮೂಲೆ ಮೂಲೆಗಳಲ್ಲಿ ಒಂದಲ್ಲ ಒಂದು ಕನ್ನಡ ಪರವಾದ ಚಳವಳಿ ನಡೆಯುತ್ತಿತ್ತು. ಕಾರ್ಯಕರ್ತರು ಎಲ್ಲ ಅಂಗಡಿಗಳವರು ಕನ್ನಡ ನಾಮ ಫಲಕ ಹಾಕಲು ಕರೆಕೊಟ್ಟರು. ಕೊಟ್ಟ ಕರೆಯನ್ನು ಕೇಳುವವರಾರು! ಕನ್ನಡ ಯುವಕರು ಕನ್ನಡೇತರ (ವಿಶೇಷವಾಗಿ ತಮಿಳು) ನಾಮಫಲಕಗಳಿಗೆ ಬಣ್ಣ ಬಳಿವುದು, ಕೆಲವು ಸಂದರ್ಭಗಳಲ್ಲಿ ಅವನ್ನು ಕೆಳಗಿಳಿಸ ತೊಡಗಿದರು. ಇಂದು ಕನ್ನಡಮಯವಾಗಿರುವ ಮಾಗಡಿ ರಸ್ತೆಯಲ್ಲಿ ಬರೀ ತಮಿಳು ಬೋರ್ಡ್‌ಗಳಿದ್ದುದು, 5 ಲೀಟರ್ ಪೈಂಟ್ ಕೊಂಡು ತಮಿಳು ಬೋರ್ಡ್‌ಗಳಿಗೆ ಬಣ್ಣ ಬಳಿದಿದ್ದನ್ನು ಜಿ. ಸಿ. ನಾರಾಯಣ ವಿವರಿಸುವ ರೀತಿ ನಮಗೆ ಸ್ಫೂರ್ತಿ ನೀಡುತ್ತದೆ. ಮಾಗಡಿ ರಸ್ತೆಯಲ್ಲಿ ನಡೆಯುತ್ತಿದ್ದ ಫುಟ್ಬಾಲ್ ಪಂದ್ಯಾವಳಿಯಲ್ಲಿ ತಮಿಳರದೆ ಆರ್ಭಟ, ಅದನ್ನು ಪ್ರತಿಭಟಿಸಲು ಕನ್ನಡಿಗರು ಕನ್ನಡ ಬಾವುಟ ಬಳಸುತ್ತಿದ್ದುದು. ಇವುಗಳನ್ನು ಹೇಳುವಾಗ ಅಂದಿನ ಕನ್ನಡಿಗರ ದುಃಸ್ಥಿತಿ ಕಣ್ಣಿಗೆ ಕಟ್ಟುತ್ತದೆ. ಕನ್ನಡ ನಾಮ ಫಲಕದ ಚಳವಳಿ ತೀವ್ರವಾದಂತೆ ಅಂಗಡಿ ಮಾಲೀಕರು ಪೊಲೀಸರ ರಕ್ಷಣೆ ಕೇಳಿದರು. ಕನ್ನಡ ಕಾರ್ಯಕರ್ತರು ಪೊಲೀಸರ ಆತಿಥ್ಯ ಅನುಭವಿಸಬೇಕಾಗಿ ಬಂತು. ಪೋಲೀಸ್ ಠಾಣೆಗೆ ಹೋಗಿ ಕನ್ನಡ ಕಾರ್ಯಕರ್ತರನ್ನು ಬಿಡಿಸುವುದೇ ರಾಮಮೂರ್ತಿಯವರಿಗೆ ದೊಡ್ಡ ಕೆಲಸವಾಯಿತು. ಇಲ್ಲಿ ಒಂದು ಘಟನೆಯನ್ನು ನಮೂದಿಸುವುದು ಸೂಕ್ತವೆನ್ನಿಸುತ್ತದೆ. ತಮಿಳರ ಪ್ರಾಬಲ್ಯವಿದ್ದ ಮೈಕೊ ಕಾರ್ಖಾನೆಯಲ್ಲಿ ಅಲ್ಲಿನ ಕನ್ನಡ ಕಾರ್ಮಿಕರು ಒಂದು ದಿನ ತೀವ್ರ ಸಂಘರ್ಷ ನಡೆಸಿದರಂತೆ. ಕೆಲವು ತಮಿಳರು ಮುಖ್ಯ ಕನ್ನಡ ಕಾರ್ಯಕರ್ತರ ಹೆಸರನ್ನು ನಮೂದಿಸಿ ಪೊಲೀಸರಿಗೆ ದೂರು ನೀಡಿದರು. ಈ ದೂರನ್ನು ಸ್ವೀಕರಿಸಿ ಪೊಲೀಸರು ಆ ಕಾರ್ಯಕರ್ತರನ್ನು ಸಂಜೆ ಬಂಧಿಸಿದರಂತೆ, ಉಳಿದ ಕನ್ನಡ ಕಾರ್ಯಕರ್ತರು ಎಷ್ಟೇ ಪ್ರಯತ್ನಿಸಿದರೂ ಪೊಲೀಸರು ಬಂಧಿತರನ್ನು ಬಿಡಲಿಲ್ಲ. ಕೊನೆಗೆ ಬೆಂಗಳೂರಿನ ಹಲವು ಕನ್ನಡ ನಾಯಕರನ್ನು ಸಂಪರ್ಕಿಸಿ ವಿಫಲರಾದ ಇವರು ಕೊನೆಯದಾಗಿ ಮ. ರಾಮಮೂರ್ತಿ ಅವರಲ್ಲಿಗೆ ಹೋದರಂತೆ. ವಿಷಯ ತಿಳಿದ ಅವರು ತಕ್ಷಣ ಹೊರಟರಂತೆ. ಆದರೆ ಕಾರ್ಯಕರ್ತರು ಸುಮ್ಮನೆ ನಿಂತರು. ಕಾರಣ ಅವರನ್ನು ರಿಕ್ಷಾದಲ್ಲಿ ಕರೆದುಕೊಂಡು ಹೋಗಲು ಇವರಲ್ಲಿ ಹಣವಿಲ್ಲ. ಪರಿಸ್ಥಿತಿ ಅರ್ಥಮಾಡಿಕೊಂಡ ರಾಮಮೂರ್ತಿಯವರು ನಡುರಾತ್ರಿಯಲ್ಲಿ ನಡೆದೇ ಮಡಿವಾಳ ಪೊಲೀಸ್ ಠಾಣೆ ತಲುಪಿದರು. ಅಲ್ಲಿ ಪೊಲೀಸರು ಬಂಧಿತರನ್ನು ಬಿಡಲೊಪ್ಪಲಿಲ್ಲವಂತೆ. ರಾಮ

ಮೂರ್ತಿಯವರು ಅಂದಿನ ನಗರದ ಪೊಲೀಸ್ ಕಮೀಷನರ್ ಚಾಂಡಿಯವರನ್ನೇ ಕರೆತಂದರಂತೆ. ಬಂಧಿತ ಕನ್ನಡ ಕಾರ್ಯಕರ್ತರಿಗೆ ಜಾಮೀನು ನೀಡಿದವರು ಮಾಜಿ ಮುಖ್ಯಮಂತ್ರಿ ಶ್ರೀ ಬಿ. ಡಿ. ಜತ್ತಿ. ರಾಮಮೂರ್ತಿಯವರ ಬಗ್ಗೆ ಹೇಳಲು ಇಂತಹ ನೂರಾರು ಘಟನೆಗಳು ಇವೆ. ಆದರೆ ಅದು ಈ ಲೇಖನದ ಉದ್ದೇಶವಲ್ಲ.

ರಾಮಮೂರ್ತಿಯವರ ಅಂದಿನ ಸ್ಥಿತಿಯನ್ನು ಹತ್ತಿರದಿಂದ ಬಲ್ಲವರು ಹೀಗೆ ಹೇಳಿದ್ದಾರೆ. — "ರಾಮಮೂರ್ತಿಯವರ ಮೇಲಿದ್ದ ಮೊಕದ್ದಮೆಗಳಿಗೆ ಲೆಕ್ಕವೇ ಇಲ್ಲ. ತಮ್ಮ ಮೇಲಿದ್ದ ಮೊಕದ್ದಮೆಗಳ ಜೊತೆಗೆ, ಅವರು ಜಾಮೀನು ಕೊಟ್ಟು ಕನ್ನಡ ಚಳವಳಿಗಾರರನ್ನು ಬಿಡಿಸಿದ ಮೊಕದ್ದಮೆಗಳು ಬೇರೆ. 1962 ರಿಂದ ರಾಮಮೂರ್ತಿ-ಪೊಲೀಸ್-ನ್ಯಾಯಾಲಯ ಈ ಮೂರು ಒಂದಕ್ಕೊಂದು ಬೆಸೆದುಕೊಂಡಿತ್ತು. ಸ್ವತಃ ಧನಿಕರಲ್ಲದ ರಾಮಮೂರ್ತಿಯವರು ತಮ್ಮ ಜೀವನದ ಕಷ್ಟ ಕಾರ್ಪಣ್ಯಗಳ ಜೊತೆಗೆ ಸಾರ್ವಜನಿಕ ಜೀವನದ ಸಂಕಷ್ಟವನ್ನು ತಲೆಯ ಮೇಲೆ ಹೇರಿಕೊಂಡು ಅವರು ಪಡುತ್ತಿದ್ದ ಪಾಡು ವರ್ಣಿಸಲು ಸಾಧ್ಯವಿಲ್ಲದ್ದು, ಬುದ್ಧಿಬಲಕ್ಕಿಂತ ಜನಬಲವೇ ಮುಖ್ಯವೆಂದು ಭಾವಿಸಿದ್ದ ಇವರು ಹಲವು ಸಂಕಷ್ಟಗಳನ್ನು ತಂದುಕೊಂಡರು."

ವಾಟಳ್ ನಾಗರಾಜ್ ಅವರು ಮಿಂಚಿನಂತೆ ಸಂಚರಿಸಿ ಯುವಕರು ಮತ್ತು ಕೆಳಸ್ತರದ ಜನರಲ್ಲಿ ಕನ್ನಡ ಜಾಗೃತಿ ಮೂಡಿಸಿದರು. ಬೆಂಗಳೂರಿನ ಗಲ್ಲಿಗಲ್ಲಿಗಳಲ್ಲಿ ಸಭೆ ನಡೆಸಿ, ಜನರ ಭಾವನೆ ಕೆರಳಿಸಿ ಕನ್ನಡ ಕೆಲಸದಲ್ಲಿ ತೊಡಗುವಂತೆ ಮಾಡಿದರು. ಚಿಕ್ಕಪೇಟೆ, ಗಾಂಧಿನಗರ ಇವರ ಪ್ರಮುಖ ಕಾರ್ಯಕ್ಷೇತ್ರವಾದವು. ಕಾರ್ಖಾನೆಗಳ ಮುಂದೆ ಹೋಗಿ ಕನ್ನಡಿಗರಿಗೇ ಕೆಲಸ ಕೊಡಲು ಒತ್ತಾಯಿಸಿ ಪ್ರದರ್ಶನ ನಡೆಸಿದರು. ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರ ಪ್ರದರ್ಶನಕ್ಕೆ ಒತ್ತಾಯಿಸಿದರು. ಹೊಸ ಚಿತ್ರಮಂದಿರಗಳು ಪ್ರಾರಂಭವಾದಾಗಲೂ ಪರಭಾಷಾ ಚಿತ್ರಗಳನ್ನೇ ಹಾಕುತ್ತಿದ್ದರು. ನನಗಿನ್ನೂ ಚೆನ್ನಾಗಿ ನೆನಪಿದೆ—ಕಪಾಲಿ ಚಿತ್ರಮಂದಿರ ಪ್ರಾರಂಭವಾದಾಗ "ದಿಸ್ ಈಸ್ ಸಿನೇರಮ" ಎಂಬ ಆಂಗ್ಲ ಚಿತ್ರವನ್ನು ಹಾಕಿದರು. ವಾಟಾಳ್ ಚಿತ್ರಮಂದಿರದ ಮುಂದೆ ಪ್ರದರ್ಶನ ನಡೆಸಿದರು. ಗುಂಪಿನಲ್ಲಿದ್ದ ಜನ ಕಲ್ಲು ತೂರಿದರು. ಅನಂತರ ಅಲ್ಲಿ ತಕ್ಷಣ ಕನ್ನಡ ಚಲನಚಿತ್ರ ಪ್ರದರ್ಶಿಸಿದರು. ಹೀಗೆ ನಡೆದ ಚಳವಳಿಗಳು ಹಲವು. ಆಗಿಂದಾಗ್ಯೆ ರಾಮಮೂರ್ತಿ ಇರಲಿ, ವಾಟಾಳ್ ಇಲ್ಲಿ ಇನ್ನಾರೆ ಇರಲಿ, ಮೈಸೂರು ಬ್ಯಾಂಕ್ ಚೌಕದಲ್ಲಿ ಸಭೆಗಳು ನಡೆಯುತ್ತಿದ್ದವು; ಸಭೆಗೆ ಸಾವಿರಾರು ಉತ್ಸಾಹಿ ಯುವಕರು ಸೇರುತ್ತಿದ್ದರು. ಕರ್ನಾಟಕಕ್ಕೆ ಕೇಂದ್ರದಿಂದ ಆಗುತ್ತಿದ್ದ ಅನ್ಯಾಯಗಳು, ಹಾಗೂ ಇತರ ಸಮಸ್ಯೆಗಳ ಪರಿಹಾರಕ್ಕೆ ಒತ್ತಾಯಿಸಿ ರಸ್ತೆ ತಡೆ, ಪಂಜಿನ ಮೆರವಣಿಗೆ, ಬೆಂಗಳೂರು ಬಂದ್ ಹೀಗೆ ಹಲವು ಚಳವಳಿ ನಡೆಯುತ್ತಿದ್ದವು. ಇಂತಹ ಚಳವಳಿ ಸಂದರ್ಭದಲ್ಲಿ ಪೊಲೀಸರ ಕಣ್ಣು ತಪ್ಪಿಸಲು ವಾಟಾಳ್ ನಾಗರಾಜ್ ಅವರು ಬೇರೆ ವೇಷದಲ್ಲಿ ಭಾಗವಹಿಸಿ ಕೊನೆಗೆ ಬಂಧನಕ್ಕೆ ಒಳಗಾಗುತ್ತಿದ್ದುದು ಒಂದು ರಂಜನೀಯ ಸಂಗತಿ.

ಚಳವಳಿ ನಿರೀಕ್ಷಿತ ಪರಿಣಾಮ ಬೀರದಿದ್ದುದನ್ನು ಗಮನಿಸಿದ ರಾಮಮೂರ್ತಿ, ವಾಟಾಳ್ ನಾಗರಾಜ್ ಇಬ್ಬರೂ ಕನ್ನಡಿಗರ ಆಶೋತ್ತರಗಳು ಈಡೇರಬೇಕಾದರೆ ರಾಜಕೀಯ ಶಕ್ತಿಯಾಗಿ ಬೆಳೆಯುವುದು ಅನಿವಾರ್ಯ ಎಂಬ ತೀರ್ಮಾನಕ್ಕೆ ಬಂದರು. ಮ. ರಾಮಮೂರ್ತಿ ಮಿತ್ರರು "ಕನ್ನಡ ಪಕ್ಷ" ವನ್ನು, ವಾಟಾಳ್ ಅವರು "ಕನ್ನಡ ಚಳುವಳಿ" ಪಕ್ಷವನ್ನು ಕಟ್ಟಿ ಪ್ರಾಯೋಗಿಕವಾಗಿ ಬೆಂಗಳೂರು ನಗರಪಾಲಿಕೆ ಚುನಾವಣೆಯಲ್ಲಿ ಪಾಲ್ಗೊಂಡರು. ವಾಟಾಳ್ ನಗರಸಭಾ ಸದಸ್ಯರಾದರು. ರಾಮಮೂರ್ತಿಯವರಿಗೆ ನಿರೀಕ್ಷಿತ ಯಶ ದೊರೆಯಲಿಲ್ಲ.

ರಾಮಮೂರ್ತಿಯವರು ಚಳವಳಿಯಲ್ಲಿ ಇನ್ನೂ ಹೆಚ್ಚು ತೊಡಗಿಸಿಕೊಳ್ಳಲು ಜೀವನೋಪಾಯಕ್ಕೆ ಒಂದು ಮಾರ್ಗವಾದರೆ ಉತ್ತಮ ಎಂದು ಅವರ ಆಪ್ತರೊಡನೆ ಹೇಳುತ್ತಿದ್ದರಂತೆ. ಆ ನಿಟ್ಟಿನಲ್ಲಿ ಬೆಂಗಳೂರಿಗೆ ಸಮೀಪದ ಕಗ್ಗಲೀಪುರದಲ್ಲಿದ್ದ ತಮ್ಮ ಜಮೀನಿನಲ್ಲಿ ವ್ಯವಸಾಯ ಮಾಡುವ ಉದ್ದೇಶದಿಂದ ಬಾವಿ ತೋಡಿಸಲು ಪ್ರಾರಂಭಿಸಿದರು. 1968ರ ಡಿಸೆಂಬರ್‌ನಲ್ಲಿ ಒಂದು ದಿನ ತಮ್ಮ ಮಕ್ಕಳೊಡನೆ ಬಾವಿಯೊಳಗಿಳಿದು ನೀರು ಬಂದಿರುವುದನ್ನು ಸಂತೋಷದಿಂದ ನೋಡುತ್ತಿದ್ದರು. ಇದ್ದಕ್ಕಿದ್ದಂತೆಯೆ ಮಣ್ಣು ಕುಸಿಯಿತು. ಮಣ್ಣಿನಲ್ಲಿ ಮಕ್ಕಳೊಡನೆ ರಾಮಮೂರ್ತಿಯವರು ಮುಚ್ಚಿ ಹೋದರು. ಕನ್ನಡ ಸೇನಾನಿಯ ದುರ್ಮರಣ ಚಳವಳಿಯ ದಿಕ್ಕೆಡಿಸಿತು. ಕನ್ನಡಜಾಗೃತಿ ಆಂದೋಲನಕ್ಕೆ ಭರಿಸಲಾರದ ಹೊಡೆತವಾಯಿತು. ಮ. ರಾಮಮೂರ್ತಿ

ಯವರ ಮರಣದ ನಂತರ ಅವರ ಮನೆಯಲ್ಲಿ ಕನ್ನಡ ಪಕ್ಷದ ಸಭೆ ನಡೆಯಿತು. ಆ ಸಭೆಯಲ್ಲಿ ಪಾಲ್ಗೊಂಡಿದ್ದ ತರಾಸು ಅವರನ್ನು ಕನ್ನಡ ಪಕ್ಷದ ಅಧ್ಯಕ್ಷರಾಗಿ ಆಯ್ಕೆ ಮಾಡಲಾಯಿತು. ಅಂದು ಅವರು ಬೆಂಗಳೂರಿನ ದಂಡು ಪ್ರದೇಶದಲ್ಲಿ ಕನ್ನಡದ ವಾತಾವರಣ ಮೂಡಿಸುವ ಉದ್ದೇಶದಿಂದ ಅಲ್ಲಿನ ಕನ್ನಡ ಕಾರ್ಯಕರ್ತರನ್ನು ಸೇರಿಸಿ ಒಂದು ಸಮಿತಿ ರಚಿಸಿದರು. ಆ ಸಮಿತಿಯಲ್ಲಿ ಜಿ.ಕೆ. ಸತ್ಯ, ಬೆ.ರಾ. ನಾಗರಾಜ್ ಮುಂತಾದವರಿದ್ದರು. ಆ ಸಮಿತಿ ಕೆಲಸ ಪ್ರಾರಂಭಿಸುವ ಹೊತ್ತಿಗೆ ತರಾಸು ಆರೋಗ್ಯ ಹದಗೆಟ್ಟಿತು. ಅವರೂ ಚಳವಳಿಯಿಂದ ದೂರ ಸರಿದರು. ಕನ್ನಡ ಕಾರ್ಯಕರ್ತರಲ್ಲಿ ಈ ಘಟನೆ ಹತಾಶ ಭಾವನೆ ಮೂಡಿಸಿತು. 1971ರ ಮೇನಲ್ಲಿ ಅ.ನ.ಕೃ. ಮರಣ "ಕನ್ನಡ ಚಳವಳಿ"ಯ ಧ್ವನಿಯನ್ನು ಇನ್ನಷ್ಟು ಕ್ಷೀಣಗೊಳಿಸಿತು.

ವಾಟಾಳ್ ನಾಗರಾಜ್ ಅವರು ಚಿಕ್ಕಪೇಟೆ ಕ್ಷೇತ್ರ ದಿಂದ 1967 ರಲ್ಲಿ ನಡೆದ ಚುನಾವಣೆಯಲ್ಲಿ ವಿಧಾನ ಸಭೆಗೆ ಆಯ್ಕೆಯಾದರು. ವಿಧಾನ ಸಭೆಯಲ್ಲಿ ಮೊದಲ ಬಾರಿಗೆ ಕನ್ನಡ ಧ್ವನಿ ಎತ್ತಿದ್ದಲ್ಲದೆ ಕನ್ನಡದ ಕೂಗು ದೆಹಲಿಯವರೆಗೂ ಕೇಳುವಂತೆ ಮಾಡಿದರು. ಶಾಸಕರಾದ ಮೇಲೆ ಚಳವಳಿಯನ್ನು ದೊಡ್ಡ ಪ್ರಮಾಣದಲ್ಲಿ ಮಾಡುವ ಪ್ರಯತ್ನ ಮಾಡಿದರು. ಅವುಗಳಲ್ಲಿ ಉಲ್ಲೇಖಾರ್ಹ ಚಳವಳಿ ಎಂದರೆ ತಾಳವಾಡಿ, ಹೊಸೂರು ಕರ್ನಾಟಕಕ್ಕೆ ಸೇರಬೇಕೆಂದು ಒತ್ತಾಯಿಸಿ "ತಾಳವಾಡಿ ಮುತ್ತಿಗೆ" ಕಾರ್ಯಕ್ರಮ. ವಾಟಾಳರು ತಾಳವಾಡಿಗೆ ಹೋದಾಗ ತಮಿಳುನಾಡು ಮುಖ್ಯಮಂತ್ರಿ ಕರುಣಾನಿಧಿ ಅವರನ್ನು ಬಂಧಿಸಿದರು. ತಕ್ಷಣ ಬೆಂಗಳೂರಿನಲ್ಲಿ ಕನ್ನಡ ಯುವಕರು ಕರುಣಾನಿಧಿ ಕ್ರಮವನ್ನು ಪ್ರತಿಭಟಿಸಿ ಬೆಂಗಳೂರಿನಲ್ಲಿ ಹರತಾಳ ಆಚರಿಸಲು ನಿರ್ಧರಿಸಿದರು. ಅಂದು ತಮಿಳರ ಮತ್ತು ಕನ್ನಡಿಗರ ನಡುವೆ ಹಲವು ಕಡೆ ನೇರ ಹೋರಾಟ ನಡೆಯಿತು. ಇಡೀ ಮೆಜೆಸ್ಟಿಕ್ ಪ್ರದೇಶ ರಣರಂಗದಂತೆ ಕಾಣುತ್ತಿತ್ತು ಎನ್ನುತ್ತಾರೆ ಪ್ರತ್ಯಕ್ಷದರ್ಶಿ ಜಿ.ಸಿ. ನಾರಾಯಣ್.ಅದೇ ಸಂದರ್ಭದಲ್ಲಿ ವೀರಕೇಸರಿ ಉದಯ ಕುಮಾರ್ ಅವರು ಬೃಹತ್ ಸಭೆಯಲ್ಲಿ ತಮಿಳರಿಗೆ ಎಚ್ಚರಿಸಿದ್ದು ನನಗೆ ಚೆನ್ನಾಗಿ ನೆನಪಿದೆ.

ಈ ಘಟನೆಯನ್ನು ಎಲ್ಲ ರಾಜಕೀಯ ಪಕ್ಷಗಳು ಖಂಡಿಸಿದ್ದು ಮಾತ್ರವಲ್ಲದೆ ತಮಿಳರಿಗೆ ಸಹಾನುಭೂತಿ ಯನ್ನು ವ್ಯಕ್ತಪಡಿಸಿದವು. ರಾಜಕಾರಣಿಗಳು ಕನ್ನಡಿಗರೇ ಆದರೂ, ತಮಿಳರ ಓಟಿಗಾಗಿ ಅವರ ಪರ ವಹಿಸಿ ತಮಿಳ ರಿಗೆ ಹಾನಿಯಾಗಿದೆ ಎಂದು ಹೇಳಿದ್ದು, ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ಕನ್ನಡಿಗರಿಗೆ ತಮಿಳರಿಂದ ಹಿಂಸೆಯಾದ ಹಲವು ಉದಾಹರಣೆಗಳಿದ್ದರೂ, ತಮಿಳ ರನ್ನು ಖಂಡಿಸದೇ ಇದ್ದ ಕರ್ನಾಟಕದ ರಾಜಕಾರಣಿಗಳ ಧೋರಣೆ ಕನ್ನಡ ಕಾರ್ಯಕರ್ತರಲ್ಲಿ ತೀವ್ರ ಅಸಮಾಧಾನ ಮೂಡಿಸಿತು.

ಈ ಘಟನೆಯ ನಂತರ ಬೆಂಗಳೂರು ಮಹಾನಗರ ಪಾಲಿಕೆ ಚುನಾವಣೆ ನಡೆಯಿತು. ಕನ್ನಡ ಚಳವಳಿ ಏಣಿ ಗುರುತಿನಲ್ಲಿ ಬಹುತೇಕ ಸ್ಥಾನಗಳಿಗೆ ಸ್ಪರ್ಧಿಸಿತು. ಆದರೆ ಅಧಿಕಾರದ ಏಣಿ ಹತ್ತಲು ವಿಫಲವಾಗಿದ್ದಷ್ಟೇ ಅಲ್ಲ, ಚಳವಳಿಯಲ್ಲಿ ಗುಂಪುಗಾರಿಕೆ ಬೆಳೆಯಿತು. ತಾಳವಾಡಿ ಘಟನೆ ತಮಿಳರು ಹೆಚ್ಚು ಸಂಘಟಿತರಾಗುವಲ್ಲಿ ಸಹಕಾರಿ ಯಾಗಿ ಚಳವಳಿಗಾರರಿಗಿಂತ ಡಿ.ಎಂ.ಕೆ. ಪಕ್ಷ ಹೆಚ್ಚು ಸ್ಥಾನ ಗಳಿಸಿತು.

1972 ರಲ್ಲಿ ನಡೆದ ಚುನಾವಣೆಯಲ್ಲಿ ಚಾಮರಾಜ ಪೇಟೆಯಿಂದ ನಾಗರಾಜ್ ಶಾಸಕರಾಗಿ ಆಯ್ಕೆಯಾದರು. ಇವರ ವಿರುದ್ಧ ಸೋತ ದಯಾನಂದ ಸಾಗರ್ ನ್ಯಾಯಾ ಲಯದಲ್ಲಿ ಚುನಾವಣಾ ತಕರಾರು ಎತ್ತಿದ್ದರು. ನ್ಯಾಯಾಲಯ ವಾಟಾಳರ ಆಯ್ಕೆಯನ್ನು ಅನೂರ್ಜಿತ ಗೊಳಿಸಿದ್ದಲ್ಲದೆ ಆರು ವರ್ಷ ಚುನಾವಣೆಯಲ್ಲಿ ಸ್ಪರ್ಧಿಸು ವುದನ್ನು ನಿಷೇಧಿಸಿತು. ಅನಂತರ ನಡೆದ ಮರು ಚುನಾವಣೆಯಲ್ಲಿ ಚಳವಳಿಯ ಅಭ್ಯರ್ಥಿ ಶ್ರೀ ಪ್ರಭಾಕರ ರೆಡ್ಡಿ ಅವರು ಗೆದ್ದರು. ಆದರೆ ಹಲವು ಕಾರಣಗಳಿಂದ ಮತ್ತೆ ಕನ್ನಡಚಳವಳಿ ಹಲವು ಗುಂಪುಗಳಾಗಿ ಒಡೆಯಿತು. ಕನ್ನಡದ ಪರವಾಗಿ ಬಹಳಷ್ಟು ಸಮಾಜವಾದಿಗಳು ಧ್ವನಿ ಎತ್ತುತ್ತಿದ್ದರು. ಇಂದಿನ ಮುಖ್ಯಮಂತ್ರಿ ಎಸ್. ಬಂಗಾರಪ್ಪನವರು ದೆಹಲಿಯಲ್ಲಿ ವಾಟಾಳರೊಂದಿಗೆ ಕಪ್ಪು ಬಾವುಟ ಪ್ರದರ್ಶನ ನಡೆಸಿದ್ದರು. ಅನಂತರದ ಚಳವಳಿ ಎಂದರೆ ಕೇವಲ ರಾಜ್ಯೋತ್ಸವ ಆಚರಣೆ ಅನ್ನುವ ಹಂತ ತಲುಪಿತು. ಕೆಲವು ಪ್ರತಿಭಟನೆಗಳು ನಡೆದರೂ ಅವು ಪ್ರಹಸನಗಳಂತೆ ಕಂಡು ಅಪಹಾಸ್ಯಕ್ಕೊಳಗಾದವು. ಚಳವಳಿ ಎಂದರೆ ಹಣಸಂಗ್ರಹ, ಕಲ್ಲು ಹೊಡೆಯುವುದು ಅನ್ನುವ ಹಂತ ತಲುಪಿ ಬಹಳಷ್ಟು ನಿಷ್ಠಾವಂತ ಕನ್ನಡ ಕಾರ್ಯಕರ್ತರು ಚಳವಳಿಯಿಂದ ದೂರ ಸರಿದರು. ಕನ್ನಡ ಚಳವಳಿ ಅಂದರೆ ಮರ್ಯಾದಸ್ಥರಿಗಲ್ಲ ಅನ್ನುವ ವಾತಾವರಣ ನಿರ್ಮಾಣವಾದದ್ದು ಕನ್ನಡ ಜಾಗೃತಿಗೆ

ಬಿದ್ದ ಬಹು ದೊಡ್ಡ ಹೊಡೆತ. ಈ ಹೊಡೆತದಿಂದ ಸುಧಾರಿಸಿಕೊಳ್ಳಲು ಚಳವಳಿಗೆ ಬಹಳಕಾಲ ಬೇಕಾಯಿತು. ಇಂತಹ ಸಂದರ್ಭದಲ್ಲಿಯೂ ಕರ್ನಾಟಕದಲ್ಲಿ ಚಿತ್ರರಂಗ ನೆಲೆಯೂರಬೇಕೆಂಬ ವಿಚಾರದಲ್ಲಿ ಚಳವಳಿಗಾರರ ಶ್ರಮ ಅಪಾರ. ಕರ್ನಾಟಕದಲ್ಲಿ ತಯಾರಾದ ಚಿತ್ರಗಳಿಗೆ ಸಬ್ಸಿಡಿ ಕೊಡಲು ಕನ್ನಡ ಕಾರ್ಯಕರ್ತರ ಒತ್ತಡವೇ ಕಾರಣ. ಇಂದು ಕರ್ನಾಟಕದಲ್ಲಿ ಚಿತ್ರರಂಗ ನೆಲೆಯೂರಿ ಬೆಳೆಯಲು ಕಾರಣಕರ್ತರು ಕನ್ನಡ ಚಳವಳಿಗಾರರೆ. ದಿನಗಳು ಉರುಳಿದಂತೆ ಚಳವಳಿಗೆ ಹತ್ತಾರುಜನ ನಾಯಕರಾದರು. 'ಕನ್ನಡ ಚಳವಳಿ' ವಾಟಾಳ್ ಚಳವಳಿ ಎಂದೆ ಹೆಸರು ಗಳಿಸಿತು. ಜಿ. ನಾರಾಯಣಕುಮಾರ್ ಕೂಡ ಸ್ವಲ್ಪ ಸುದ್ದಿ ಮಾಡಿದರು. ಕನ್ನಡ ಚಳವಳಿಯ ವಿಘಟನೆ ಕನ್ನಡೇತರ ಶಕ್ತಿಗಳು ಮತ್ತೆ ಬೆಳೆಯಲು ಸಹಾಯಕ ವಾಯಿತು. ಕನ್ನಡಿಗರಲ್ಲಿ ದೂರವಾಗುತ್ತಿದ್ದ 'ಪರಕೀಯ ಪ್ರಜ್ಞೆ' ಮತ್ತೆ ಗಾಢವಾಗಿ ಕಾಡತೊಡಗಿತು. ತಮ್ಮದೇ ಆದ ನಾಡಿನಲ್ಲಿ ಕನ್ನಡಿಗರು ಅಲ್ಪಸಂಖ್ಯಾತರಂತೆ ಸಂಘ ಗಳನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದರು.

1967 ರಲ್ಲಿ ಕೇಂದ್ರ ಸರ್ಕಾರದ ಹಿಂದಿ ಹೇರಿಕೆ ಯನ್ನು ವಿರೋಧಿಸಿ ರಾಜ್ಯದಲ್ಲಿ ಚಳವಳಿ ನಡೆದರೂ ಪಕ್ಕದ ತಮಿಳು ನಾಡಿನಲ್ಲಿ ನಡೆದಷ್ಟು ಪರಿಣಾಮಕಾರಿ ಯಾಗಿ ನಡೆಯಲಿಲ್ಲ. ತಮಿಳರು ಹಿಂದಿ ಹೇರಿಕೆಯಿಂದ ತಪ್ಪಿಸಿಕೊಂಡರೆ, ಕನ್ನಡಿಗರು ಹಿಂದಿ ಹೇರಿಕೆಯ ಭಾರ ಹೊರಲಾರದೆ ಕುಸಿಯುತ್ತಿದ್ದಾರೆ. ಇದಕ್ಕೆ ಪ್ರಮುಖ ಕಾರಣ ನಾವು ಹಿಂದಿ ಹೇರಿಕೆಯ ಅಪಾಯವನ್ನು ಸರಿ ಯಾಗಿ ಗ್ರಹಿಸದೆ ಹೋದದ್ದು.

1969 ರಲ್ಲಿ ಹಳೆಯ ಮೈಸೂರಿಗೆ ಅನ್ಯಾಯ ವಾಗಿದೆ ಎಂದು ಕೆಲವರು "ಮೈಸೂರು ರಕ್ಷಣಾ ಸಮಿತಿ" ಯನ್ನು ಮಾಡಲು ಪ್ರಯತ್ನಿಸಿದರು. ಇದಕ್ಕೆ ಡಾ॥ ಚನ್ನಾರೆಡ್ಡಿಯವರ "ತೆಲಂಗಾಣ ಚಳವಳಿ"ಯ ಸ್ಫೂರ್ತಿ ಇದ್ದಂತೆ ಕಾಣುತ್ತದೆ. ಇಂತಹ ಆಲೋಚನೆಗಳು ಜಾಗೃತ ಕನ್ನಡಿಗರ ಪ್ರತಿಭಟನೆಯಿಂದ ಪ್ರಯತ್ನದ ಹಂತದಲ್ಲೇ ನಿಂತವು. 1973 ರಲ್ಲಿ ಮೈಸೂರು ರಾಜ್ಯ ಕರ್ನಾಟಕ ವಾಗಿ ಪುನರ್ ನಾಮಕರಣವಾಯಿತು. 1956 ರಿಂದ 73ರವರೆಗೆ 18 ವರ್ಷಗಳ ಕಾಲ ಇದಕ್ಕೆ ಹಲವು ಒತ್ತಡ ಗಳು ಬಂದವು. ಎಲ್ಲ ಸಾಹಿತ್ಯ ಸಮ್ಮೇಳನಗಳಲ್ಲಿ ನಿರ್ಣಯ ಮಾಡಲಾಗುತ್ತಿತ್ತು. ಎಲ್ಲ ಸಂಘ ಸಂಸ್ಥೆಗಳೂ ಒತ್ತಡ ಹೇರುತ್ತಲೇ ಇದ್ದವು. ಅದನ್ನು ಪುರಸ್ಕರಿಸಿದ ಅಂದಿನ ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರು ಎಲ್ಲ ಕನ್ನಡಿಗರ ಅಭಿನಂದನೆಗೆ ಪಾತ್ರರಾದರು.

**ಮಹಾಜನ್ ವರದಿ :**

"ಕರ್ನಾಟಕ-ಮಹಾರಾಷ್ಟ್ರ ಹಾಗೂ ಕರ್ನಾಟಕ-ಕೇರಳಗಳ ಗಡಿ ಸಮಸ್ಯೆಯನ್ನು ಬಗೆಹರಿಸಲು ಏಕಸದಸ್ಯ ಉಚ್ಚ ಸಮಿತಿಯನ್ನು ನೇಮಿಸಬೇಕು" ಎಂಬ 1966ರ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಗೊತ್ತುವಳಿಯು ಜಾಗೃತ ಕನ್ನಡಿಗರ ತೀವ್ರ ಪ್ರತಿಭಟನೆಗೆ ಒಳಗಾಯಿತು. ರಾಜ್ಯ ಪುನರ್ಘಟನಾ ಆಯೋಗ, ಕೇಳಕರ್ ಆಯೋಗ, ಧಾರ್ ಆಯೋಗ, ಫಜಲ್ ಅಲಿ ಆಯೋಗಗಳು ಕರ್ನಾಟಕಕ್ಕೆ ಅನ್ಯಾಯ ಮಾಡಿದ್ದ ಹಿನ್ನೆಲೆಯಲ್ಲಿ ಮಹಾ ರಾಷ್ಟ್ರದವರ ಒತ್ತಾಯಕ್ಕೆ ಮಣಿದು "ಆಯೋಗ"ವನ್ನು ನೇಮಕ ಮಾಡುವ ಉದ್ದೇಶವನ್ನು ಕೇಂದ್ರ ಸರ್ಕಾರ ಪ್ರಕಟಿಸಿದಾಗ, ಕರ್ನಾಟಕದ ಮೂಲೆ ಮೂಲೆಗಳಲ್ಲಿ ಪ್ರತಿಭಟನಾ ಸಭೆ, ರಸ್ತೆತಡೆ, ರೈಲು ತಡೆಗಳಂತಹ ಉಗ್ರ ಪ್ರತಿಕ್ರಿಯೆ ವ್ಯಕ್ತವಾದವು. ಬೆಂಗಳೂರು, ಬೆಳಗಾವಿ, ಧಾರವಾಡ ಮುಂತಾದ ನಗರಗಳಲ್ಲಿ ಬಂದ್ ಆಚರಿಸ ಲಾಯಿತು. ಕನ್ನಡಿಗರ ಉಗ್ರ ಪ್ರತಿಭಟನೆ ವ್ಯಕ್ತವಾದಾಗ ಎಸ್. ನಿಜಲಿಂಗಪ್ಪನವರಿಗೆ ಈ ಆಯೋಗದ ನೇಮಕಕ್ಕೆ ಒಪ್ಪಿದ್ದು ತಪ್ಪು ಎಂದು ಮನವರಿಕೆ ಆಯಿತು. ನಿಜಲಿಂಗಪ್ಪನವರು 'ಈ ಆಯೋಗವು ಸಣ್ಣಪುಟ್ಟ ಹೊಂದಾಣಿಕೆಯನ್ನು ಮಾತ್ರ ಪರಿಶೀಲಿಸುವುದು, ಈಗಾಗಲೆ ನಿರ್ಧಾರವಾಗಿರುವ ವಿಷಯವನ್ನಲ್ಲ' ಎಂಬ ಹುಸಿ ಸಮರ್ಥನೆ ನೀಡಿದರು. ಕನ್ನಡಿಗರ ಅಭೀಪ್ಸೆಗೆ ವಿರುದ್ಧವಾಗಿ "ಮಹಾಜನ್ ಆಯೋಗ"ವು ನೇಮಕ ವಾಯಿತು. ಮಹಾರಾಷ್ಟ್ರದವರು ಆಯೋಗದ ನೇಮಕ ವನ್ನು ಸ್ವಾಗತಿಸಿದರು. ನಿಜಲಿಂಗಪ್ಪನವರ ಹೇಳಿಕೆಗೆ ವಿರುದ್ಧವಾಗಿ "ಮೈಸೂರು-ಮಹಾರಾಷ್ಟ್ರ ಗಡಿ ಸಮಸ್ಯೆ" ಎಂದು ಕೇಂದ್ರ ಸರ್ಕಾರ ಪ್ರಕಟಿಸಿತು. ಬೆಳಗಾವಿ ಜಿಲ್ಲೆಯ ಧುರೀಣರು ಸಂಘಟಿತ ಹೋರಾಟಕ್ಕೆ ಸಜ್ಜಾದರು. ಶ್ರೀ ಮಹಾಜನ್ ಅವರು ತೀವ್ರ ಪ್ರತಿಭಟನೆ ಎದುರಿಸಬೇಕಾಯಿತು. ಕೊನೆಗೂ "ಮಹಾ ಜನ್ ವರದಿ" ಹೊರಬಂದಾಗ ಕರ್ನಾಟಕ ತಂಬಾಕು ಬೆಳೆಯುವ ಖಾನಾಪುರ, ನಿಪ್ಪಾಣಿಗಳಂತಹ ಶ್ರೀಮಂತ ಪ್ರದೇಶಗಳನ್ನು ಕಳೆದುಕೊಂಡರೂ ಬೆಳಗಾವಿ ಉಳಿಯಿತು ಎನ್ನುವ ಒಂದೇ ಕಾರಣದಿಂದ ಕರ್ನಾಟಕದವರು ವರದಿ

ಯನ್ನು ಸ್ವಾಗತಿಸಿದರು. ವಾಸ್ತವವಾಗಿ ಮಹಾಜನ್ ವರದಿಯಿಂದ ಕರ್ನಾಟಕ ಕಳೆದುಕೊಳ್ಳುವುದೇ ಹೆಚ್ಚು. ಬೆಳಗಾವಿಯನ್ನು ಕಬಳಿಸುವ ತಮ್ಮ ಆಸೆ ಕೈಗೂಡಲಿಲ್ಲ ವೆಂದು ಮರಾಠಿಗರು ವರದಿಯನ್ನು ತಿರಸ್ಕರಿಸಿದರು. ವರದಿ ಸಲ್ಲಿಸಿ ಇಪ್ಪತ್ತು ವರ್ಷ ಕಳೆದರೂ ಕರ್ನಾಟಕದವ ರಾದ ನಾವು ವರದಿಗೆ ಒತ್ತಾಯಿಸಿ ಹಲವು ರೀತಿಯ ಚಳವಳಿ ನಡೆಸುತ್ತಲೇ ಇದ್ದೇವೆ. ಈ ವರದಿಯ ಅನುಷ್ಠಾನಕ್ಕೆ ಒತ್ತಾಯಿಸಿ ಬೆಂಗಳೂರಿನಲ್ಲಿ ನಡೆದ ರೈಲು ತಡೆ ಚಳವಳಿಯಲ್ಲಿ ಮು. ಗೋವಿಂದರಾಜ್ ಅವರು ಪ್ರಾಣವನ್ನೇ ತೆತ್ತಿದ್ದಾರೆ. ಆದರೆ, ವರದಿ ಜಾರಿ ಆಗುವ ಸಾಧ್ಯತೆ ಸದ್ಯ ಭವಿಷ್ಯದಲ್ಲಿ ಕಂಡುಬರುವಂತಿಲ್ಲ.

**ಗೋಕಾಕ್ ವರದಿ :**

ಪ್ರೌಢಶಾಲೆಗಳಲ್ಲಿ ಬೋಧಿಸುವ ಭಾಷೆಗಳ ವಿಷಯಕವಾದ ಕೆಲವು ಅಕ್ರಮಗಳನ್ನು ಸರಿಪಡಿಸಲು ಪ್ರೊ॥ ವಿ. ಕೃ. ಗೋಕಾಕ್ ನೇತೃತ್ವದಲ್ಲಿ ಆಯೋಗ ವೊಂದನ್ನು ರಾಜ್ಯ ಸರ್ಕಾರವು ನೇಮಿಸಿದಾಗ ತೀವ್ರ ಪ್ರತಿಭಟನೆ ವ್ಯಕ್ತವಾಯಿತು. ಬೆಂಗಳೂರಿನಲ್ಲಿ ಗೋಕಾಕ್ ರಿಗೆ ಮುಜುಗರ ಹುಟ್ಟಿಸುವ ಪ್ರಸಂಗಗಳು ನಡೆದವು. ಧಾರವಾಡದಲ್ಲಿ 'ಗೋ ಕಾಕ್, ಗೋ ಬ್ಲಾಕ್' ಎಂಬ ಘೋಷಣೆಯಿಂದ ಪ್ರತಿಭಟನೆ ವ್ಯಕ್ತವಾಯಿತು. ಕೊನೆಗೂ ವರದಿ ಹೊರಬಿತ್ತು. ಅದು ಕನ್ನಡಪರ ವಾಗಿತ್ತಷ್ಟೇ ಅಲ್ಲ, ಕನ್ನಡ ಚಳವಳಿಗೆ ಹೊಸ ಆಯಾಮ ಒದಗಿಸಿ ಮಲಗಿದ್ದ ಕನ್ನಡಿಗರನ್ನು ಜಾಗೃತಗೊಳಿಸಿತು. ಈ ವರದಿಯ ಅನುಷ್ಠಾನಕ್ಕೆ ನಡೆದ ಚಳವಳಿ "ಗೋಕಾಕ್ ಚಳವಳಿ" ಎಂದೇ ಪ್ರಸಿದ್ಧಿ ಪಡೆದು ಕನ್ನಡಿಗರಲ್ಲಿ ನಾಡು-ನುಡಿಯ ವಿಚಾರದಲ್ಲಿ ಎಚ್ಚರ ಮೂಡಿಸಿದ ಒಂದು ಅವಿಸ್ಮರಣೀಯ ಸಂಗತಿ.

ಕರ್ನಾಟಕ ಏಕೀಕರಣದನಂತರದ "ಕನ್ನಡ ಚಳವಳಿ"ಗಳನ್ನು ಅವಲೋಕಿಸಿದಾಗ ನಮ್ಮ ಗಮನಕ್ಕೆ ಬರುವ ಎರಡು ಮುಖ್ಯ ಅಂಶಗಳೆಂದರೆ : ಕನ್ನಡಕ್ಕಾಗಿ ಹೋರಾಟ ನಡೆಸಿದವರಿಗೆ ಕನ್ನಡದ ಬಗ್ಗೆ ಕಳಕಳಿಯಿತ್ತು ಹಾಗೂ ತತ್ಕಾಲೀನ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ ಮಾತ್ರ ಹೆಚ್ಚು ಆಸಕ್ತಿಯಿತ್ತು. ಆದರೆ ಸಂಘಟನೆಯ ವಿಚಾರದಲ್ಲಿ ವ್ಯವಸ್ಥಿತವಾಗಿ ಚಿಂತಿಸುವ ಮನೋಭಾವ ವಿರಲಿಲ್ಲ. ಹಾಗೂ ಚಳವಳಿ ನಾಯಕರಿಗೆ ದೀರ್ಘಕಾಲೀನ ಸಮಸ್ಯೆಗಳ ಅರಿವಿರಲಿಲ್ಲ. ಜೊತೆಗೆ ಅವರವು ವ್ಯಕ್ತಿಗತ ಸಂಘಟನೆಗಳಾಗಿದ್ದುವು. ಹೀಗಾಗಿ ಇವು ಭಾವನಾತ್ಮಕ ಚಳವಳಿ ಎಂದು ಹೆಸರು ಗಳಿಸಿದವು.

ಗೋಕಾಕ್‌ಚಳವಳಿಯ ನಂತರ ತತ್ಕಾಲೀನ ಸಮಸ್ಯೆಯ ಜೊತೆಯಲ್ಲೇ ದೀರ್ಘಕಾಲೀನ ಸಮಸ್ಯೆಗಳ ವಿಚಾರದಲ್ಲಿ ಯೋಚಿಸಿ ಕನ್ನಡ-ಕನ್ನಡಿಗ-ಕರ್ನಾಟಕಗಳ ಸರ್ವತೋಮುಖ ಅಭಿವೃದ್ಧಿಗೆ ಯೋಜನೆಗಳನ್ನು ಚಿಂತಿಸಿ ಚಳವಳಿ ತಾತ್ವಿಕ ತಳಹದಿ ಪಡೆಯಿತು. ಅದರ ಫಲಗಳೇ ಮಹಿಷಿ ವರದಿ, ಕನ್ನಡ ವಿಶ್ವವಿದ್ಯಾಲಯ ಮುಂತಾದವು.

ಕನ್ನಡ ಚಳವಳಿಯ ಎರಡನೇ ಹಂತವೆಂದು ಗುರುತಿಸುವ 1982ರ ನಂತರದ ಚಳವಳಿಗಳ ಬಗ್ಗೆ ಒಂದು ಗ್ರಂಥಕ್ಕೆ ಆಗಬಹುದಾದ ಸಾಮಗ್ರಿಯಿರುವುದ ರಿಂದ ನಾನು ಅದರ ಬಗ್ಗೆ ಈ ಲೇಖನದಲ್ಲಿ ಬರೆಯುವು ದಿಲ್ಲ. ಗಂಭೀರ ಪ್ರವೃತ್ತಿಯ ಹಿರಿಯ ಸಂಶೋಧಕ ಡಾ॥ ಎಂ. ಚಿದಾನಂದ ಮೂರ್ತಿಯವರು ಚಳವಳಿಗೆ ಪ್ರವೇಶಿಸಿದ ಮೇಲೆ ಚಳವಳಿಗೆ ಹೊಸ ಗಾಂಭೀರ್ಯ, ಘನತೆ ಬಂದದ್ದು ಮಾತ್ರವಲ್ಲ, ಒಂದು ಹೊಸ ಆಯಾಮವೇ ಬಂದು, ಚಳವಳಿಗಾರ ಅನ್ನುವುದು ಇಂದು ಹೆಮ್ಮೆಯ ಸಂಗತಿಯಾಗಿದೆ. ನಾನು ಇದರಲ್ಲಿ ಪಾಲ್ಗೊಳ್ಳು ತ್ತಿದ್ದೇನೆ ಅನ್ನುವುದೇ ನನಗೆ ಹೆಮ್ಮೆಯ ಸಂಗತಿ.

[ಈ ಲೇಖನ ಸಿದ್ಧಪಡಿಸುವಲ್ಲಿ ಹಲವು ರೀತಿಯಲ್ಲಿ ನೆರವಾದ ಹಿರಿಯ ಆದರ್ಶ ಕಾರ್ಯಕರ್ತ ಬೆ. ರಾ. ನಾಗರಾಜ್, ಜಿ. ಸಿ. ನಾರಾಯಣ, ಎಸ್. ನಾಗರಾಜ್ ಶ್ರೀ ಕೆ. ಮಹದೇವರಾವ್ ಅವರುಗಳಿಗೆ ತುಂಬ ಆಭಾರಿಯಾಗಿದ್ದೇನೆ.]

# ಕ್ರೈಸ್ತರು ಮತ್ತು ಕನ್ನಡ ಚಳುವಳಿ

**ಮರಿಜೋಸೆಫ್**

ಹಿಂದೆ ಚರ್ಚಿನ ಪುರೋಹಿತವರ್ಗ ತನಗೆ ಲಭಿಸಿದ್ದ ಅಧಿಕಾರವನ್ನು ಮುಗ್ಧ ಕ್ರೈಸ್ತ ಜನಸಾಮಾನ್ಯರ ಮೇಲೆ ನಿಷ್ಠುರವಾಗಿ ಚಲಾಯಿಸಿ ಧರ್ಮಸಭೆಯ ಒಡಕಿಗೆ ಕಾರಣವಾದಾಗ ಎಚ್ಚೆತ್ತ ಧರ್ಮಸಭೆಯ ಅಧಿಕಾರಿಗಳು ೧೯೬೨ರಲ್ಲಿ ವ್ಯಾಟಿಕನ್‌ನಲ್ಲಿ ಸಮಾವೇಶಗೊಂಡು ಹಿಂದಿನ ಎಲ್ಲಾ ದುಷ್ಕೃತ್ಯಗಳಿಗೆ ಬಹಿರಂಗ ಕ್ಷಮೆ ಕೋರಿ, ಜನಪರವಾದ ಹೊಸ ಶಾಸನಗಳನ್ನು ಹೊರಡಿಸಿದರು. ಚರ್ಚಿನ ಅಧಿಕಾರ ಆಗ ವಿಕೇಂದ್ರೀಕೃತವಾಯ್ತು. ಸ್ಥಳೀಯ ಸಂಸ್ಕೃತಿ ಹಾಗೂ ಸ್ಥಳೀಯ ಭಾಷೆಗಳಿಗೆ ಮಾನ್ಯತೆ ದೊರಕಿತು.

ಆದರೆ ಈ ಧಾರ್ಮಿಕ ಸುಧಾರಣೆ ಬೆಂಗಳೂರಿನಲ್ಲಿ ಚಾಲ್ತಿಗೆ ಬರಲಿಲ್ಲ. ಅಂದು ಇಲ್ಲಿ ಧರ್ಮಪಾಲಕರಾಗಿದ್ದ ಅನ್ಯಭಾಷಿಕ ಧರ್ಮಾಧಿಕಾರಿಗಳ ನೀಚತನದಿಂದಾಗಿ ಕನ್ನಡ ಸಂಸ್ಕೃತಿಯ ಮೇಲಿನ ಅತ್ಯಾಚಾರ ನಿರಂತರವಾಗಿ ನಡೆಯತೊಡಗಿತು. ಚರ್ಚು ವಲಸೆಗಾರರ ಏಜಂಟಿನಂತೆ ವರ್ತಿಸತೊಡಗಿತು. ಸ್ಥಳೀಯ ಕನ್ನಡ ಕ್ರೈಸ್ತರು ಇದನ್ನು ಅರಿತುಕೊಳ್ಳುವ ಮೊದಲೇ ಬಹಳಷ್ಟು ಅನಾಹುತಗಳು ಸಂಭವಿಸಿದ್ದವು.

ಹೀಗೆ ಮಣ್ಣಿನ ಮಕ್ಕಳಲ್ಲಿ ಸುಪ್ತವಾಗಿ ಹೊಗೆಯಾಡುತ್ತಿದ್ದ ಅಸಹನೆಯ ಕಾವು ೧೯೭೭ ರಲ್ಲಿ ಯಶವಂತಪುರದ ಶ್ರೀ ಕ್ರೈಸ್ತರಾಜರ ದೇವಾಲಯದಲ್ಲಿ ಭುಗಿಲೆದ್ದಾಗ ಈ ಕ್ರೈಸ್ತರ ಕನ್ನಡ ಚಳುವಳಿ ಸರ್ವರ ಗಮನ ಸೆಳೆಯಿತು. ಜನಸಾಮಾನ್ಯರ ಕೂಗಿಗೆ ಸ್ಪಂದಿಸದೆ ಕಣ್ಣು ಮುಚ್ಚಿಕೊಂಡಿದ್ದ ಧರ್ಮಸಭೆ (ಚರ್ಚ್)ಯನ್ನು ತಿವಿದು ಎಬ್ಬಿಸಿ ಗಾಂಧಿಮಾರ್ಗದಲ್ಲಿ ಹೋರಾಟ ಪ್ರಾರಂಭಿಸಿದ ಕನ್ನಡ ಕ್ರೈಸ್ತರು ಧಾರ್ಮಿಕ ಮುಖಂಡರಿಂದ ಬಹಿಷ್ಕಾರದ ಬೆದರಿಕೆಯನ್ನು, ಮನೆಮಂದಿಯಿಂದ ವಾಗ್ಬಾಣಗಳನ್ನು ಎದುರಿಸಬೇಕಾಗಿ ಬಂದರೂ ಅಂದಿನ ಐತಿಹಾಸಿಕ ಘಟನೆಗೆ ಕಾರಣಪುರುಷರಾದರು.

ಕರ್ನಾಟಕದ ಚರ್ಚುಗಳಲ್ಲಿ ಕನ್ನಡಕ್ಕೆ ಮೊದಲ ಮರ್ಯಾದೆ ಸಿಕ್ಕಬೇಕು. ಚರ್ಚುಗಳ ಸವಲತ್ತುಗಳು ಸ್ಥಳೀಯ ಕನ್ನಡ ಕ್ರೈಸ್ತರಿಗೇ ದಕ್ಕಬೇಕು ಎಂಬ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಪ್ರಾರಂಭಗೊಂಡ ಈ ಪುಟ್ಟ ಸಂಘಟನೆ ಅನಂತರ ಇನ್ನೂ ಹತ್ತು ಹಲವು ಬೇಡಿಕೆಗಳನ್ನು ಸೇರಿಸಿಕೊಂಡು "ಕರ್ನಾಟಕ ಕಥೋಲಿಕ ಕ್ರೈಸ್ತರ ಕನ್ನಡ ಸಂಘ" ಎಂಬ ದೊಡ್ಡ ಸಂಘಟನೆಯಾಯಿತು.

ತನ್ನ ಬೇಡಿಕೆಗಳ ಈಡೇರಿಕೆಗಾಗಿ ಹೋರಾಡುವ ಕರ್ತವ್ಯದೊಂದಿಗೆ ಮುಗ್ಧ ಕನ್ನಡ ಕ್ರೈಸ್ತರನ್ನು ಹೊಸ ಕ್ರಾಂತಿಗೆ ತಯಾರು ಮಾಡುವ ಗುರುತರವಾದ ಜವಾಬ್ದಾರಿಯನ್ನು ಹೊತ್ತು ಸಂಘ ಬೆಳೆಯತೊಡಗಿತು. ಕ್ರೈಸ್ತ ಕನ್ನಡಿಗರ ನ್ಯಾಯಯುತ ಬೇಡಿಕೆಗಳನ್ನು ಚರ್ಚು ಈಡೇರಿಸುವುದರ ಬದಲಿಗೆ ತಮಿಳು ಕ್ರೈಸ್ತರನ್ನು ಎತ್ತಿಕಟ್ಟಿ ವಿರೋಧ ಹುಟ್ಟಿಸುವಲ್ಲಿ ಯಶಸ್ವಿಯಾಯಿತು. ಕನ್ನಡ ಕ್ರೈಸ್ತರನ್ನು ಜೈಲಿಗೆ ಕಳಿಸುವ ಸಾಹಸಕ್ಕೂ ಕೈ ಹಾಕಿತು. ಅನಂತರ ಸಂಘಟನೆ ಬೃಹತ್‌ವ್ಯಾಪಿಯಾಯಿತು. ವಿಧಾನಸೌಧದಿಂದ ಬಿಷಪ್ಪರ ನಿವಾಸದೆಡೆಗೆ ಮಹಾಮೆರವಣಿಗೆಗಳು ಸಾಗಿದವು.

ಪಾಟೀಲ ಪುಟ್ಟಪ್ಪನವರು ತಮ್ಮ 'ಪ್ರಪಂಚ' ಪತ್ರಿಕೆಯಲ್ಲಿ ಈ ಘಟನೆ-ಕ್ರೈಸ್ತರ ಧರ್ಮಜಾಗೃತಿ ಎಂದು ಕರೆದರು. ಇತರ ಪತ್ರಿಕೆಗಳೂ ಅಗ್ರಲೇಖನಗಳನ್ನು ಬರೆದು ಕ್ರೈಸ್ತರ ಕನ್ನಡ ಚಳುವಳಿಯನ್ನು ಬೆಂಬಲಿಸಿದವು. ಸಾಹಿತಿಗಳಾದ ಕುವೆಂಪು, ಪು.ತಿ.ನ., ವಿನಾಯಕ, ಎಂ.ವಿ.ಸೀ., ಹಾಮಾ ನಾ, ಜಿ.ಎಸ್.ಎಸ್, ಹಂಪನಾ, ಸಿ.ಪಿ.ಕೆ, ಸಿದ್ಧಯ್ಯ ಪುರಾಣಿಕ, ನಾ. ಡಿಸೋಜ ಮುಂತಾದವರು ತಮ್ಮ ಹೃತ್ಪೂರ್ವಕ ಬೆಂಬಲವನ್ನು ಸೂಚಿಸಿದರು.

ಕನ್ನಡ ಕ್ರೈಸ್ತರ ಭಾಷಾ ಚಳುವಳಿ ವಿವಿಧ ಆಯಾಮಗಳನ್ನು ತಳೆದು ವಿಸ್ತಾರವಾಗುತ್ತಾ ಹೋದಂತೆ ಚರ್ಚಿನ ವರಿಷ್ಠರು ಪರಿಹಾರ ಹುಡುಕಲೆತ್ನಿಸಿದರು. ಭಾರತೀಯ ಕಥೋಲಿಕ ಸಮಾವೇಶ (ಭಾಕಥಸ)ವು ಈ ಸಮಸ್ಯೆಯ ಅಧ್ಯಯನ ಮಾಡಿ ಪರಿಹಾರ ಸೂಚಿಸಲು ಬಿಷಪ್ ಹೆನ್ರಿ ಡಿಸೋಜರವರ ನೇತೃತ್ವದಲ್ಲಿ ಬಿಷಪ್ ತ್ರಯರ ಆಯೋಗವನ್ನು ನೇಮಿಸಲು ಈ ಆಯೋಗಕ್ಕೆ ವಿಶದವಾದ ವಿಚಾರವ್ಯಾಪ್ತಿಯನ್ನು ನೀಡಿ ಇದರ ಪರಿಹಾರೋಪಾಯ ಭಾರತದ ಇತರ ಭಾಗಗಳಲ್ಲಿ ಸತ್ಪರಿಣಾಮ ಬೀರುವಂತಿರಬೇಕೆಂಬ ಷರತ್ತನ್ನು ಒಡ್ಡಲಾಗಿತ್ತು. ಆಯೋಗವು ೧೯೮೧ ಸೆಪ್ಟೆಂಬರ್ ೩ ರಿಂದ ೯ ರವರಿಗೆ ಅಭಿಪ್ರಾಯಗಳನ್ನು ಸಂಗ್ರಹಿಸಿತು. ಕನ್ನಡ ಸಾಹಿತಿಗಳ ಪರವಾಗಿ ಡಾ॥ ಎಂ. ಚಿದಾನಂದ ಮೂರ್ತಿ, ಜಿ. ರಾಮಕೃಷ್ಣ ಹಾಗೂ ಸುಮತೀಂದ್ರ ನಾಡಿಗರು ಹೇಳಿಕೆ ಕೊಟ್ಟರು. (ಅಂದಿನಿಂದ ಇಂದಿನ ವರೆಗೂ ಡಾ॥ ಎಂ. ಚಿದಾನಂದಮೂರ್ತಿಯವರು ನಮ್ಮ ಸಂಘದ ದೃಢ ಬೆಂಬಲಿಗರಾಗಿ ನಿಂತಿದ್ದಾರೆ)

ಅದೇ ವೇಳೆಗೆ ಗೋಕಾಕ್ ವರದಿ ಪರ ಅಲೆ ಎದ್ದು ಸೆನೆಟ್ ಭವನದಲ್ಲಿ ಡಾ॥ ಎಂ.ಸಿ.ಎಂ.ರವರು ಮಾಡಿದ ಭಾಷಣ ಹಾಗೂ ಅವರು ಕಟ್ಟಿದ ಸಾಹಿತಿ ಕಲಾವಿದರ ಬಳಗದ ಸ್ಫೂರ್ತಿಯಿಂದ ನಮ್ಮ ಸಂಘವು ಗೋಕಾಕ್ ವರದಿ ಪರ ಚಳುವಳಿಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿತು.

ಬಿಷಪ್‌ತ್ರಯರ ಆಯೋಗವು ತನ್ನ ವರದಿಯನ್ನು ಪೋಪರ ಅನುಮೋದನೆಯೊಂದಿಗೆ ಡಿಸೆಂಬರ್ ೫,೧೯೮೨ ರಂದು ಸಲ್ಲಿಸಿತು. ವರದಿಯ ಬಹುಭಾಗ ಕನ್ನಡ ಕ್ರೈಸ್ತರ ಮನೋಭಾವವನ್ನು ಎತ್ತಿ ಹಿಡಿದಿತ್ತು. ಬಿಷಪ್ಪರು ವರದಿಯ ಪೂರ್ಣ ಪಾಠವನ್ನು ಪ್ರಕಟಿಸುವ ಗೋಜಿಗೆ ಹೋಗಲಿಲ್ಲ. ಆದರೆ ಕನ್ನಡ ಪ್ರಾಧಾನ್ಯದ ಅವಶ್ಯಕತೆ ಯನ್ನು ಒತ್ತಿ ಹೇಳುವ ೩/೮೩ ಸುತ್ತೋಲೆಯನ್ನು ಹೊರಡಿಸಿದರು. ಆದರೆ ಅದರ ಅನುಷ್ಠಾನ ಮಾತ್ರ ಆಗಲಿಲ್ಲ.

ಇಪ್ಪತ್ತು ತಿಂಗಳನಂತರ ಕ್ರೈಸ್ತ ಕನ್ನಡ ಯುವಕರ ಬಳಗವು ಈ ವಿಷಯವನ್ನು ಗಂಭೀರವಾಗಿ ತೆಗೆದುಕೊಂಡಿದ್ದರಿಂದ ಬಿಷಪರು ನಾಲ್ಕು ಯುವಕರನ್ನು ಮಾತುಕತೆಗೆ ಆಹ್ವಾನಿಸಿದರು. ಆದರೆ ಕನ್ನಡಕ್ಕೆ ಇಂಬು ಕೊಡುವ ಮಾತನ್ನಾಡದೆ ಬಿಷಪ್ಪರು ಉದ್ಧಟತನದಿಂದ ವರ್ತಿಸಿದಾಗ ಪಾದ್ರಿಗಳು ಅಲ್ಲೇ ಧರಣಿ ಕುಳಿತರು. ಬಿಷಪ್ಪರು ಕ್ರುದ್ಧವಾಗಿ ವರ್ತಿಸಿ ಪಾದ್ರಿಗಳನ್ನು ಬಂಧನ ಕ್ಕೊಳಪಡಿಸಿದ್ದರಿಂದ ಪರಿಸ್ಥಿತಿ ಹದಗೆಟ್ಟು ಚಳುವಳಿ ತೀವ್ರವಾಯಿತು. ಜನಸಾಮಾನ್ಯರ ಧ್ವನಿಯನ್ನು ಎದುರಿಸಲಾಗದ ಬಿಷಪ್ಪರು ದೀರ್ಘರಜೆಯ ಮೇಲೆ ತೆರಳಿದರು. ಧರ್ಮಪ್ರಾಂತ್ಯದಲ್ಲಿ ಅರಾಜಕತೆ ಉಂಟಾಯಿತು.

ಪೋಪರು ಭಾರತಕ್ಕೆ ಭೇಟಿ ನೀಡಿದಾಗ ಬೆಂಗಳೂರಿಗೂ ಸ್ವಾಗತಿಸಲು ವ್ಯಾಟಿಕನ್ ರಾಯಭಾರಿ ಮುಂತಾದವರು ಸಂಘದೊಂದಿಗೆ ಪತ್ರ ವ್ಯವಹಾರ ನಡೆಸಿದರು. ಪೋಪರ ಭೇಟಿಯನ್ನು ಸ್ವಾಗತಿಸಿದ ಸಂಘವು ಆ ನೆಪದಲ್ಲಿ ಬಿಷಪ್ ಆರೋಕ್ಯಸಾಮಿಯವರ ಪುನರ್ ನೇಮಕ ಸಲ್ಲದೆಂದು ಎಚ್ಚರಿಸಿತು. ಸಂಧಾನ ವಿಫಲವಾಗಿ ಪೋಪರ ಬೆಂಗಳೂರು ಭೇಟಿ ತಪ್ಪಿಹೋಯಿತು.

ಕನ್ನಡಿಗರ ಬಹುದಿನಗಳ ಕನಸು ನನಸಾಯ್ತೆಂಬಂತೆ ಚಿಕ್ಕಮಗಳೂರಿನ ಬಿಷಪ್ ಅಲ್ಫೋನ್ಸ್ ಮಥಾಯಸ್ ರವರು ಬೆಂಗಳೂರಿನ ಮಹಾಬಿಷಪ್ಪರಾಗಿ ೩-೧೨-೧೯೮೬ ರಲ್ಲ ಅಧಿಕಾರ ವಹಿಸಿಕೊಂಡರು.

ಬಿಷಪ್‌ತ್ರಯರ ಆಯೋಗದ ವರದಿಯನ್ನಾಧರಿಸಿ ಹಿಂದಿನ ಬಿಷಪ್ಪರು ಹೊರಡಿಸಿದ್ದ ೩/೮೩ ಸುತ್ತೋಲೆ ಪ್ರಕಾರ ಕನ್ನಡಕ್ಕೆ ಪ್ರಾಧಾನ್ಯ ನೀಡುವ ಕೆಲಸ ಏನೇನೂ ನಡೆದಿರಲಿಲ್ಲ. ಹೊಸ ಬಿಷಪ್ಪರು ಈ ಬಗ್ಗೆ ಏನು ನಿರ್ಧಾರ ಕೈಗೊಳ್ಳುತ್ತಾರೆಂದು ಇಡೀ ಕರ್ನಾಟಕ ಕಾತರದಿಂದ ಎದುರು ನೋಡುತ್ತಿತ್ತು. ನಮ್ಮ ನಿರಾಶೆಯೆಂಬಂತೆ ಹೊಸ ಬಿಷಪ್ಪರು ೩/೮೩ ಸುತ್ತೋಲೆಯ ಬಗ್ಗೆ ಚಕಾರ ವನ್ನೇ ಎತ್ತಲಿಲ್ಲ. ನಮ್ಮ ಚಳುವಳಿಯ ಬಗ್ಗೆ ನಿರ್ಲಿಪ್ತ ರಾಗಿದ್ದವರು ಅವರ ಆಪ್ತರಾದರು. ನಮ್ಮ ಚಳುವಳಿ ಯನ್ನು ಹತ್ತಿಕ್ಕಲೆತ್ನಿಸಿದ್ದವರು ಅವರ ಬಲಗೈ ಬಂಟ ರಾದರು. ತೀವ್ರ ಭ್ರಮನಿರಸನಗೊಂಡ ನಾವು ೩/೮೩ ಸುತ್ತೋಲೆ ೫ನೆ ವರ್ಷಕ್ಕೆ ಕಾಲಿಡುವ ದಿನ ಅಂದರೆ ೨೪-೩-೧೯೮೭ ರಂದು ಬಿಷಪ್‌ರ ಮನೆಯ ಮುಂದೆ ಸಾಂಕೇತಿಕ ಸತ್ಯಾಗ್ರಹ ಕಾರ್ಯಕ್ರಮ ಹಮ್ಮಿಕೊಂಡೆವು. ಹೌಹಾರಿದ ಬಿಷಪ್ಪರು ಈ ಸತ್ಯಾಗ್ರಹವನ್ನು ಹಿಂತೆಗೆದು ಕೊಳ್ಳಬೇಕೆಂದು ತಮ್ಮ ಬಂಟರ ಮೂಲಕ ವಿನಂತಿಸಿದರು. ಅವರಿಂದ ಕನ್ನಡ ಪರವಾದ ಲಿಖಿತ ಹೇಳಿಕೆ ಬರುವ ವರೆಗೂ ನಮ್ಮ ನಿಲುವು ಅಚಲವೆಂದು ನಾವು ಹೇಳಿದಾಗ

೩/೮೩ ಸುತ್ತೋಲೆಯನ್ನು ಯಥಾವತ್ತಾಗಿ ಅನುಷ್ಠಾನಗೊಳಿಸಲು ಪ್ರಾಮಾಣಿಕ ಪ್ರಯತ್ನ ಕೈಗೊಳ್ಳುವೆವೆಂದು ಬಿಷಪ್ಪರು ಲಿಖಿತ ಹೇಳಿಕೆ ನೀಡಿದರು. ಆದರೆ ಅದು ಕಾಗದದಲ್ಲಷ್ಟೇ ಉಳಿಯಿತು.

ಆ ಹೊಸ ಬಿಷಪ್ಪರು ಬಿಷಪ್‌ತ್ರಯರ ವರದಿಯನ್ನು ಮೂಲೆಗೆಸೆದು ಕನ್ನಡಿಗರ ಪ್ರಾತಿನಿಧ್ಯವಲ್ಲದ ಬೇರೊಂದು ಸಮಿತಿಯನ್ನು ನೇಮಕ ಮಾಡಿ ವರದಿ ಪಡೆದು ಬೆಂಗಳೂರಿನ ಭಾಷಾ ಸಮಸ್ಯೆಗೆ ಬೇರೆ ಬಣ್ಣ ಕೊಟ್ಟರು. ಕ್ರೈಸ್ತ ಕನ್ನಡಿಗರ ಚಳುವಳಿ ಅಧಿಕಾರ ದಾಹಕ್ಕಾಗಿ ನಡೆದಿದೆ ಎಂದು ತುತ್ತೂರಿ ಊದ ತೊಡಗಿದರು.

೧೯೮೭ ಆಗಸ್ಟ್ ೩೦ ರಂದು ಸಂಘವು ಪ್ರಪ್ರಥಮ ರಾಜ್ಯಮಟ್ಟದ ಕನ್ನಡ ಕ್ರೈಸ್ತರ ಸಮ್ಮೇಳನವನ್ನೇರ್ಪಡಿಸಿ ತನ್ನ ನೀತಿ ನಿಲುವುಗಳನ್ನು ಪ್ರತಿಬಿಂಬಿಸಿತು. ಕನ್ನಡ ಕ್ರೈಸ್ತರ ಮನವಿಗಳನ್ನು ತಿರಸ್ಕರಿಸುತ್ತಾ ಅವರನ್ನು ದ್ವೇಷದಿಂದ ಕಾಣತೊಡಗಿದ ಬಿಷಪ್ಪರ ನಡವಳಿಕೆಯನ್ನು ಖಂಡಿಸಿ ಸಂಘವು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ಮಾತುಕತೆ ನಡೆಸಲು ಎಷ್ಟೇ ಅವಕಾಶಗಳಿದ್ದಾಗ್ಯೂ ಬಿಷಪ್ಪರು ಸಂಘದ ಮೇಲಿನ ತಮ್ಮ ದ್ವೇಷವನ್ನು ಹೆಚ್ಚಿಸಿಕೊಂಡೇ ಬಂದರು. ಕೊನೆಗೆ ೩-೧೨-೧೯೮೭ ರಂದು ಸಂಘದ ಮೇಲೆ ಕೋರ್ಟಿನ ತಡೆಯಾಜ್ಞೆ ತಂದು ಸತ್ಯಾಗ್ರಹ ನಡೆಸದಂತೆ, ಚರ್ಚ್ ಅನ್ನು ಪ್ರಶ್ನಿಸದಂತೆ ಮಾಡಿದರು. ಸುಳ್ಳು ಮೊಕದ್ದಮೆಗಳನ್ನು ಹೂಡಿ ಕಾರ್ಯಕರ್ತರನ್ನು ದಮನ ಮಾಡಲೆತ್ನಿಸಿದರು.

ಕೋರ್ಟಿನ ತಡೆ ಇದೆಯೆಂದ ಮಾತ್ರಕ್ಕೆ ಸಂಸ್ಕೃತಿಯ ನಾಶವನ್ನು ನೋಡುತ್ತಾ ಸುಮ್ಮನೆ ಕೂರಲಾದೀತೇ ? ನ್ಯಾಯಾಲಯ ನಮ್ಮ ಕೈ ಕಟ್ಟಿದಾಗ ಇತರ ಕನ್ನಡ ಬಾಂಧವರು ನಮ್ಮ ನೆರವಿಗೆ ಬಂದರು. ಕನ್ನಡ ಸಂಘರ್ಷ ಸಮಿತಿಯ ರೆಹಮಾನ್‌ಖಾನ್‌ರವರು ಪತ್ರಕರ್ತ ರಾಮಣ್ಣ ಕೋಡಿಹೊಸಹಳ್ಳಿ, ಕ. ಸಾ. ಪ. ಅಧ್ಯಕ್ಷ ಪ್ರೊ॥ ಜಿ. ಎಸ್. ಸಿದ್ದಲಿಂಗಯ್ಯ, ಸಾಹಿತಿ ಕಲಾವಿದರ ಬಳಗದ ಡಾ॥ ಎಂ. ಚಿದಾನಂದಮೂರ್ತಿ ಮುಂತಾದ ಕನ್ನಡದ ಗಣ್ಯರನ್ನು ಕಲೆಹಾಕಿ ಚರ್ಚುಗಳಲ್ಲಿ ಕನ್ನಡ ಪ್ರಾಧಾನ್ಯದ ಗುರಿ ಸಾಧನೆಗೆ ಯಶವಂತಪುರದಲ್ಲಿ "ಕನ್ನಡ ಕಾರ್ಯಕರ್ತರ ವೇದಿಕೆ" ಹುಟ್ಟುಹಾಕಿದರು.

ವೇದಿಕೆ ಬಹು ವ್ಯವಸ್ಥಿತವಾಗಿ ಕನ್ನಡ ಕ್ರೈಸ್ತರ ಪರ ಹೋರಾಟವನ್ನು ಕೈಗೆತ್ತಿಕೊಂಡಿತು. ಆಸಿಡ್ ಪ್ರಕರಣ ಹಾಗೂ ಬಿಷಪ್ ನಿವಾಸದ ಗಲಭೆ ಪ್ರಕರಣಗಳಲ್ಲಿ ಧರ್ಮಸಭೆ ಕ್ರೈಸ್ತ ಕನ್ನಡ ಕಾರ್ಯಕರ್ತರನ್ನು ಪಾದ್ರಿಗಳನ್ನು ಪೊಲೀಸ್ ಚಿತ್ರಹಿಂಸೆಗೆ ಈಡು ಮಾಡಿದಾಗ ವೇದಿಕೆ ಕಬ್ಬನ್‌ಪಾರ್ಕಿನಲ್ಲಿ ಸತ್ಯಾಗ್ರಹ ಶಿಬಿರ ನಡೆಸಿ ಅಲ್ಲಿಂದ ಬಿಷಪ್ ನಿವಾಸದವರೆಗೆ ಸುಮಾರು ೧೫೦೦೦ ಮಂದಿಯ ಬೃಹತ್ ಮೆರವಣಿಗೆ ಕೊಂಡೊಯ್ದಿತು. ವೇದಿಕೆಯ ಪ್ರತಿನಿಧಿಗಳ ಮನವಿ ಸ್ವೀಕರಿಸಲು ಬಿಷಪ್ಪರು ಒಪ್ಪದಿದ್ದಾಗ ಅನಿವಾರ್ಯವಾಗಿ ಡಾ॥ ಎಂ. ಚಿದಾನಂದಮೂರ್ತಿಯವರು ಅನಿರ್ದಿಷ್ಟ ಕಾಲದ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದರು. ನಾಲ್ಕನೇ ದಿನ ಅವರು ನಿತ್ರಾಣರಾದಾಗ ಪೊಲೀಸರು ಬಲಾತ್ಕಾರದಿಂದ ಅವರನ್ನು ಆಸ್ಪತ್ರೆಗೆ ಸಾಗಿಸಿದರು.

ಇಷ್ಟೆಲ್ಲಾ ಆದರೂ ಕ್ರೈಸ್ತ ಧಾರ್ಮಿಕ ಮುಖಂಡರ ಭಂಡತನ ನಡೆದೇ ಇದೆ. ಕ್ರೈಸ್ತ ಜನಸಾಮಾನ್ಯರ ಈ ಹೋರಾಟಕ್ಕೆ ಬರೀ ಭಾಷೆಯ ಬಣ್ಣ ಕೊಡುವ ಅವರು ಈ ಹೋರಾಟದ ಹಿಂದೆ ಮಣ್ಣಿನ ಮಕ್ಕಳ ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ, ಔದ್ಯೋಗಿಕ ಆಯಾಮಗಳಿವೆ ಎಂದು ಅರ್ಥ ಮಾಡಿಕೊಂಡೇ ಇಲ್ಲ. ಅರ್ಥವಾಗಿದ್ದರೂ ಈಡೇರಿಸುವ ಇಷ್ಟ ಅವರಿಗಿಲ್ಲ.

ಇಂದಲ್ಲ ನಾಳೆ ನ್ಯಾಯ ದೊರೆಯುವುದು ಖಂಡಿತ ಎಂಬ ಆಶಾಭಾವನೆಯೊಂದಿಗೆ ಸಂಘ ಎದೆಗುಂದದ ಮುನ್ನಡೆಯುತ್ತಿದೆ. ಇದಕ್ಕೆ ಯೇಸುಸ್ವಾಮಿಯ ಕೃಪಾಬಲ, ಮತ್ತು ಕನ್ನಡ ಕಾರ್ಯಕರ್ತರ, ಸಾಹಿತಿಗಳ, ಪತ್ರಿಕೆಗಳ ಹಾಗೂ ಸಂಘ ಸಂಸ್ಥೆಗಳ ಕೆಚ್ಚೆದೆಯ ಬೆಂಬಲವೇ ಶ್ರೀರಕ್ಷೆಯಾಗಿದೆ.

---

# ಕಾಲೇಜು ಕನ್ನಡ ಸಂಘಗಳ ಸಾಹಿತ್ಯ ಪರಿಚಾರಿಕೆ

**ಡಿ. ವಿ. ಪ್ರಹ್ಲಾದ್**

ಕನ್ನಡ ಪುಸ್ತಕಗಳ ಪ್ರಕಟಣೆಯ ಇತಿಹಾಸದಲ್ಲಿ ಕಾಲೇಜು ಕನ್ನಡ ಸಂಘಗಳದ್ದು ಒಂದು ವಿಶಿಷ್ಟ ರೀತಿಯ ಇತಿಹಾಸ ಪರಂಪರೆಯನ್ನು ಒಳಗೊಂಡಿದೆ. ಯುವಕರ ಹೊಸ ಕನಸು ಉತ್ಸಾಹಗಳಿಗೆ ಕಾಲೇಜು ಕನ್ನಡ ಸಂಘಗಳು ಆಶ್ರಯವನ್ನು ನೀಡಬೇಕಾದ್ದು ಸಹಜ. ಹೊಸ ಕನ್ನಡ ಆರಂಭ ಕಾಲದ ಸುಮಾರಿಗೆ ನಾಡು ನುಡಿಗಳಿಗೆ ಹೋದ ಜೀವ ತುಂಬುವ ಉತ್ಸಾಹ ಎಲ್ಲೆಡೆ ಕಂಡು ಬರುತ್ತಿತ್ತು. 1918ರಲ್ಲಿ ಹಿರಿಯರಾದ ಡಾ॥ ಎ. ಆರ್. ಕೃಷ್ಣಶಾಸ್ತ್ರಿಗಳು ವಿದ್ಯಾರ್ಥಿಗಳಲ್ಲಿ ಕನ್ನಡದ ಬಗ್ಗೆ ಶ್ರದ್ಧೆ, ಅಭಿಮಾನ ಮೂಡಿಸಲು ಸೆಂಟ್ರಲ್ ಕಾಲೇಜಿನಲ್ಲಿ ಕರ್ನಾಟಕ ಸಂಘವನ್ನು ಪ್ರಾರಂಭಿಸಿದರು. ಸಂಘವು ಅನೇಕ ಚಟುವಟಿಕೆಗಳ ಜೊತೆ ಜೊತೆಗೆ ಕನ್ನಡ ಪುಸ್ತಕಗಳನ್ನು ಕರ್ನಾಟಕ ಸಂಘದ ಮೂಲಕ ಪ್ರಕಟಿಸುವ ಕೆಲಸವನ್ನು ಪ್ರಾರಂಭಿಸಿತು. ಮೈಸೂರು ಸೀತಾರಾಮ ಶಾಸ್ತ್ರಿಗಳ 'ಪ್ರತಿಮಾ ನಾಟಕ', ಸಿ. ಕೆ. ವೆಂಕಟ ರಾಮಯ್ಯನವರ 'ಸಂಯುಕ್ತಾಪಹರಣ' 'ಸಂಸರ' ವಿಗಡ ವಿಕ್ರಮರಾಯ' ವಿ. ಸೀ. ಯವರ 'ಪಂಪಾಯಾತ್ರೆ' ಮಾಸ್ತಿಯವರ ಜನಪ್ರಿಯ ಕಾದಂಬರಿ 'ಸುಬ್ಬಣ್ಣ', ಕುವೆಂಪುರವರ 'ಯಮನ ಸೋಲು', 'ಮಲೆನಾಡಿನ ಚಿತ್ರಗಳು' ಬಿ. ಎಂ. ಶ್ರೀಯವರ 'ಅಶ್ವತ್ಥಾಮನ್', 'ಇಂಗ್ಲೀಷ್ ಗೀತೆಗಳು', ಜಿ. ಪಿ. ರಾಜರತ್ನಂ ಅವರ 'ಚೀನಾದೇಶದ ಬೌದ್ಧ ಯಾತ್ರಿಕರು' ಮುಂತಾದ 51 ಪುಸ್ತಕಗಳು 1918 ರಿಂದ 1939 ರವರಿಗೂ ಪ್ರಕಟಗೊಂಡವು.

ಇದೇ ರೀತಿಯಲ್ಲಿ, ಮೈಸೂರಿನ ಮಹಾರಾಜ ಕಲಾ ಕಾಲೇಜು 'ಕರ್ನಾಟಕ ಸಂಘ' 1928 ರಲ್ಲಿ ಹೊರ ತಂದ ತಳಿರು ಮತ್ತು 'ಕಿರಿಯರ ಕಾಣಿಕೆ' ಐತಿಹಾಸಿಕ ಮಹತ್ವ ಹೊಂದಿರುವ ಪ್ರಕಟಣೆಗಳು.

1930ರಲ್ಲಿ ಅದೇ ಕರ್ನಾಟಕ ಸಂಘ ತನ್ನ ತಳಿರು ಸಂಕಲನದಮೂಲಕ ಕುವೆಂಪು, ಎಂ.ವಿ. ಸೀತರಾಮಯ್ಯ, ಜಿ. ಪಿ. ರಾಜರತ್ನಂ, ಪು.ತಿ.ನ, ದಿನಕರ ದೇಸಾಯಿ, ತೀನಂಶ್ರೀ, ಎಲ್. ಗುಂಡಪ್ಪ ಮುಂತಾದವರ ಕವಿತೆಗಳನ್ನು ಪ್ರಕಟಿಸಿತು. ಆ ಕಾಲಕ್ಕೆ ಹರಿದು ಹಂಚಿ ಹೋಗಿದ್ದ ಕನ್ನಡತನವನ್ನು ಒಗ್ಗೂಡಿಸುವ ಪ್ರಯತ್ನ ನಡೆಯುತ್ತಿತ್ತು. ಆಗ ಕನ್ನಡ ಸಂಘಗಳು ತಮ್ಮ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಉತ್ಸಾಹ ತುಂಬಿ, ಅವರಲ್ಲಿ ಸಂಘಟನಾ ಶಕ್ತಿ ಮತ್ತು ತಿಳುವಳಿಕೆ ಹೆಚ್ಚಿಸುವ ನಿಟ್ಟಿನಲ್ಲಿ ಚರ್ಚಾಕೂಟಗಳನ್ನು, ಸ್ಪರ್ಧೆಗಳನ್ನು ನಡೆಸುತ್ತಿತ್ತು. ವಿದ್ಯಾರ್ಥಿಗಳ ಜೊತೆ ಸಾರ್ವಜನಿಕರಿಗೂ ಉಪಯೋಗವಾಗುವ ರೀತಿಯಲ್ಲಿ ಉಪನ್ಯಾಸಗಳನ್ನು ಏರ್ಪಡಿಸಿ, ಅತ್ಯಂತ ಮಹತ್ವವಾದ ಗ್ರಂಥ ಪ್ರಕಟಣೆಯ ಕಾರ್ಯವನ್ನು ನಡೆಸಿತ್ತು. ಇದೇ ಸಂದರ್ಭದಲ್ಲೇ ಡಾ॥ ಎ.ಆರ್. ಕೃಷ್ಣಶಾಸ್ತ್ರಿಗಳು 'ಪ್ರಬುದ್ಧ ಕರ್ನಾಟಕ' ಪತ್ರಿಕೆ ಆರಂಭಿಸುವ ನಿರ್ಧಾರ ಮಾಡಿದರು. ಮುಂದೆ ಅದೊಂದು ಸಾಹಿತ್ಯಿಕ ಮೈಲಿಗಲ್ಲಾಯಿತು. ನವೋದಯ ಸಾಹಿತ್ಯದ ಎಲ್ಲ ಅತಿರಥ ಮಹಾರಥರ ಕೃತಿಗಳನ್ನು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ ಪ್ರಕಟಸಿತು.

1939ರ ಹೊತ್ತಿಗೆ ಇಡೀ ದೇಶದಾದ್ಯಂತ ತೀವ್ರಗೊಂಡ ಸ್ವಾತಂತ್ರ್ಯ ಚಳುವಳಿಯ ಕಾರಣದಿಂದ, ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ, ಇತರೆ ಚಟುವಟಿಕೆಗಳು ನಡೆದರೂ ಪುಸ್ತಕ ಪ್ರಕಟಣೆ ಸ್ಥಗಿತಗೊಂಡಿತ್ತು. ಹದಿಮೂರು ವರ್ಷಗಳ ನಂತರ 1952ರಲ್ಲಿ ಡಾ॥ ಜಿ.ಪಿ. ರಾಜರತ್ನಂ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಚಟುವಟಿಕೆಗಳಿಗೆ ಹೊಸ ಚೈತನ್ಯವನ್ನು ತುಂಬಿ ಹೊಸ ಅರ್ಥವನ್ನೂ ನೀಡಿದರು. 1962ರವರೆಗೂ ಹತ್ತು ವರ್ಷಗಳ ಕಾಲ ರಾಜರತ್ನಂ ಅವರ ನೇತೃತ್ವದಲ್ಲಿ 51

ಪುಸ್ತಕಗಳು ಹೊರ ಬಂದವು. ಗೋವಿಂದಪೈ ಅವರ 'ಗಿಳಿವಿಂಡು', ವಿ.ಸೀ. ಅವರ 'ಹೆಜ್ಜೆ ಹಾಡು', 'ದೀಪಗಳು' ಬಿ. ಜಿ. ಎಲ್. ಸ್ವಾಮಿಯವರ 'ಪಂಚಕಳಶಗೋಪುರ' ಮುಂತಾದವು ಆ ಕಾಲಕ್ಕೆ ಬೆಳಕು ಕಂಡ ಮುಖ್ಯ ಪುಸ್ತಕಗಳು. ರಾಜರತ್ನಂ ತಾವು ನೇತೃತ್ವ ವಹಿಸಿದ್ದ ಕಾಲದಲ್ಲಿ ಕರ್ಣಾಟಕ ಸಂಘಕ್ಕೆ ಹೊಸ ತಿರುವು ನೀಡಿದರು. ವಿದ್ಯಾರ್ಥಿಗಳ ಬರವಣಿಗೆಗಳನ್ನು ಬರೆಸಿ ತಿದ್ದಿ ಪ್ರಕಟಸುವ ಮೂಲಕ, 'ಕಾಲೇಜ್ ಬರವಣಿಗೆ' ಎನ್ನುವ ಪ್ರಕಟಣಾ ಮಾಲೆಯನ್ನೇ ರಾಜರತ್ನಂ ಆರಂಭಿಸಿದರು. ಈ ಮಾಲೆಯಲ್ಲಿ 'ಬಾಲಸರಸ್ವತಿ', 'ನಮ್ಮ ನಮ್ಮವರು' 'ಚಿನ್ನದ ದೋಸೆ', 'ಮಕ್ಕಳ ಮಾತು', 'ಪದ್ಯಾಂಜಲಿ' ನಮ್ಮ ಬೇಂದ್ರೆಯವರು. ಮುಂತಾದ ಪುಸ್ತಕಗಳು ಪ್ರಕಟಗೊಂಡವು. ಆಗ ಸೆಂಟ್ರಲ್ ಕಾಲೇಜು ವಿದ್ಯಾರ್ಥಿಗಳಾಗಿದ್ದ ಪಿ. ಲಂಕೇಶ್, ನಿಸಾರ್ಅಹಮದ್, ನಾಡಿಗ್, ಎಲ್. ಜಿ. ಸುಮಿತ್ರ ಮುಂತಾದವರಿಂದ ಕವಿತೆ ಲೇಖನಗಳನ್ನು ಬರೆಸಿ ಪ್ರಕಟಿಸಿದರು. ಇಂದು ಅವರೆಲ್ಲರೂ ಅಂದಿನ ಕರ್ಣಾಟಕ ಸಂಘದ ಮೂಲಕ ರಾಜರತ್ನಂ ನಡೆಸಿದ ಕೆಲಸವನ್ನು ಹೆಮ್ಮೆಯಿಂದ ಸ್ಮರಿಸುತ್ತಾರೆ. ರಾಜರತ್ನಂ ನಡೆಸಿದ ಮತ್ತೊಂದು ಬಹು ಮುಖ್ಯ ಕಾರ್ಯ 'ಜ್ಞಾಪಕ ರೂಪ'ಗಳ ಪ್ರಕಟಣಾ ಮಾಲೆ ಪ್ರಾರಂಭಿಸಿದ್ದು. ಇದು ವಿದ್ಯಾರ್ಥಿಗಳ ಪಠ್ಯಕ್ಕೆ ಸಂಬಂಧಿಸಿದ ಪುಸ್ತಕ ಪ್ರಕಟಣೆಯ ಹೊಸ ರೀತಿಯ ಪ್ರಯತ್ನ. ಇದರ ಜೊತೆ ಜೊತೆಗೆ 'ಬಾಲಸಾಹಿತ್ಯ'ದ ಪ್ರಕಟಣೆಯನ್ನೂ ನಡೆಸಿದರು. ಅಂದು ರಾಜರತ್ನಂ ಹೊಸ ಪ್ರತಿಭೆಗಳನ್ನು ಬೆಳಕಿಗೆ ತರಲು ಯತ್ನಿಸಿ ಆರಂಭಿಸಿದ ಕಾರ್ಯ ಇಂದು ಅನೇಕ ದಿಕ್ಕುಗಳಿಗೆ, ಅನೇಕ ಕಾಲೇಜುಗಳಿಗೆ ಹಬ್ಬಿದೆ. ಸೆಂಟ್ರಲ್ ಕಾಲೇಜು 1968ರಲ್ಲಿ 'ಕರ್ನಾಟಕ ಸಂಘ'ದ ಸುವರ್ಣ ಮಹೋತ್ಸವದ ನೆನಪಿಗೆ 'ಚಿನ್ನದ ಗರಿ' ಎನ್ನುವ ವಿದ್ಯಾರ್ಥಿ ಕವನ ಸಂಕಲನ ಹೊರ ತಂದಿತು. ಇದರಲ್ಲಿ ಇಂದು ಪ್ರಮುಖವಾಗಿರುವ ಅನೇಕ ಬರಹಗಾರರ ವಿದ್ಯಾರ್ಥಿದೆಸೆಯ ಕವಿತೆಗಳಿವೆ. ಬಿ. ಆರ್. ಲಕ್ಷ್ಮಣರಾವ್, ಜಯಸುದರ್ಶನ, ಎಚ್. ಎಸ್. ರಾಘವೇಂದ್ರರಾವ್, ದೊಡ್ಡರಂಗೇಗೌಡ, ಭಾಗ್ಯಲಕ್ಷ್ಮಿ ಎನ್. ವಿ., ಚಿ. ಶ್ರೀನಿವಾಸರಾಜು ಮುಂತಾದವರು ಇವತ್ತಿಗೂ ನಮ್ಮ ನಡುವೆ ಉತ್ತಮ ಬರಹಗಾರರಾಗಿದ್ದಾರೆ.

ಅಂದಿನ ಬೆಂಗಳೂರು ಸೆಂಟ್ರಲ್ ಕಾಲೇಜು ಮತ್ತು ಮೈಸೂರು ಮಹಾರಾಜ ಕಾಲೇಜುಗಳ 'ಕರ್ನಾಟಕ ಸಂಘಗಳ' ಪರಂಪರೆಯನ್ನು ಇಂದು ಅನೇಕ ಕಾಲೇಜುಗಳು ಮುಂದುವರೆಸಿಕೊಂಡು ಬಂದಿವೆ. ಅವುಗಳಲ್ಲಿ ಮುಖ್ಯವಾಗಿ ಧಾರವಾಡದ 'ಕಿಟ್ಟಲ್ ಕಾಲೇಜು', ಬೆಂಗಳೂರಿನ 'ಕ್ರೈಸ್ಟ್ ಕಾಲೇಜು' ಶೇಷಾದ್ರಿಪುರಂ ಕಾಲೇಜು, ಸೈಂಟ್ ಜೋಸೆಫ್ ಕಾಮರ್ಸ್ ಕಾಲೇಜು, ಪುತ್ತೂರಿನ ಸೈಂಟ್ ಫಿಲೋಮಿನಾ ಕಾಲೇಜು, ವಿವೇಕಾನಂದ ಕಾಲೇಜು, ಮೈಸೂರು ಜೆ. ಎಸ್. ಎಸ್. ಕಾಲೇಜಿನ ಕನ್ನಡ ವಿಭಾಗ, ಹೊನ್ನಾವರದ ಕಲಾ ಮತ್ತು ವಿಜ್ಞಾನ ಕಾಲೇಜು, ಮಂಗಳೂರು ಮಂಗಳ ಗಂಗೋತ್ರಿಯ ಕನ್ನಡ ಸಂಘ, ಗೋಣಿಕೊಪ್ಪಲಿನ ಕಾವೇರಿ ಕಾಲೇಜು, ಬೆಂಗಳೂರಿನ ಜ್ಯೋತಿನಿವಾಸ ಕಾಲೇಜು, ಮತ್ತು ಎಂ. ಇ. ಎಸ್ ಕಾಲೇಜು, ವಿದ್ಯಾವರ್ಧಕ ಕಾಲೇಜು, ಹೊಸಪೇಟೆ ವಿಜಯನಗರ ಕಾಲೇಜು ಕನ್ನಡ ಸಂಘಗಳು ಪುಸ್ತಕ ಪ್ರಕಟಣೆ ಮತ್ತು ಹೊಸ ಪ್ರತಿಭೆಗಳ ಅನ್ವೇಷಣೆಯಲ್ಲಿ ನಿರತವಾಗಿವೆ. ಇದಷ್ಟು ಕಾಲೇಜುಗಳು ಈ ಲೇಖಕನ ತಿಳಿವಿನ ಮಿತಿಗೆ ದಕ್ಕಿರುವುದು. ಇನ್ನೂ ಅನೇಕ ಕಾಲೇಜುಗಳ ಕನ್ನಡ ಸಂಘಗಳು ಈ ಕೆಲಸದಲ್ಲಿ ನಿರತವಾಗಿರಬಹುದು.

ಬೆಂಗಳೂರಿನ ಕ್ರೈಸ್ಟ್ ಕಾಲೇಜು ಕನ್ನಡ ಸಂಘದ್ದು ಒಂದು ಅಪೂರ್ವ ಸಾಧನೆ. ಇದೇನು ಉತ್ಪ್ರೇಕ್ಷೆಯ ಮಾತಲ್ಲ, ದೊಡ್ಡ ದೊಡ್ಡ ಪ್ರಕಾಶಕರು ಕನ್ನಡ ಪುಸ್ತಕಗಳನ್ನು ಪ್ರಕಟಿಸಿ ಮಾರಲು ಹಿಂಜರಿಯುವ ಈ ಕಾಲದಲ್ಲಿ ಎ. ಆರ್. ಕೃ. ರಾಜರತ್ನಂ ಮಾದರಿಯಲ್ಲಿ ಇಂದು ನಮ್ಮೆಲ್ಲರ ಪ್ರೀತಿಯ ಶ್ರೀನಿವಾಸರಾಜು ಅವರು ಕನ್ನಡ ಸಂಘ ಕಟ್ಟಿದ್ದಾರೆ. ಯುವಬರಹಗಾರರಿಗೆ ಮತ್ತು ವಿದ್ಯಾರ್ಥಿಗಳಿಗೆ ಹೆಚ್ಚು ಒತ್ತು ಕೊಟ್ಟು ಎಪ್ಪತ್ತು ಪುಸ್ತಕಗಳನ್ನು ತಂದಿರುವ ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಸದ್ದಿಲ್ಲದೇ ನಮ್ಮ ಸಾಹಿತ್ಯಕ್ಕೆ ತನ್ನದೇ ಆ ವಿಶಿಷ್ಟ ಕೊಡುಗೆ ನೀಡಿದೆ. ಎಲ್ಲರ ಮೆಚ್ಚುಗೆ ಗಳಿಸಿರು ಇದರ ಮೂಲಕ ಅನೇಕ ಪ್ರತಿಭಾವಂತ ಕವಿಗಳು, ಬರಹಗಾರರು ಬೆಳಕು ಕಂಡಿದ್ದಾರೆ. ಇವರಲ್ಲಿ ಪ್ರಮುಖವಾ ಎಚ್. ಎಸ್. ಶಿವಪ್ರಕಾಶ್, ಪ್ರತಿಭಾನಂದಕುಮಾರ್ ಕೆ.ಎಂ. ಮುನಿಕೃಷ್ಣಪ್ಪ, ಅಬ್ದುಲ್ ರಷೀದ್ ಎನ್. ಭಾಗ್ಯಲಕ್ಷ್ಮಿ, ಟಿ. ಎನ್. ಸೀತಾರಾಮ್, ಡಿ. ವಿ. ರಾ ಶೇಖರ್, ಮೊಗಳ್ಳಿ ಗಣೇಶ್, ಸುಧಾಶರ್ಮ ಚವ

ಎಸ್, ಮಂಜುನಾಥ್, ಆರತಿ ಎಚ್.ಎಸ್, ನಾರಾಯಣ ಸ್ವಾಮಿ, ಕೆ. ವೈ. ಮಮತಾ ಜಿ. ಸಾಗರ, ರಾಮ ಚಂದ್ರಪ್ಪ ಬೇಗೂರು, ನಟರಾಜ್ ಪುಳಿಯಾರ್, ತೇಜಸ್ವಿನಿ ನಿರಂಜನ ಮುಂತಾದ ಅನೇಕ ಭರವಸೆಯ ಯುವ ಕವಿಗಳನ್ನು ಪರಿಚಯಿಸಿದ ಕೀರ್ತಿ ಕ್ರೈಸ್ಟ್ ಕಾಲೇಜಿನದ್ದು.

ಎಚ್.ಎಸ್. ರಾಘವೇಂದ್ರರಾವ್, ಕೆ.ವಿ. ನಾರಾಯಣ ಕಿ.ರಂ. ನಾಗರಾಜ, ರಾಜೇಂದ್ರಚೆನ್ನಿ, ಕೆ.ವಿ.ತಿರುಮಲೇಶ್ ಮುಂತಾದವರ ವಿಮರ್ಶಾ ಲೇಖನಗಳು ಪ್ರೊ. ಎ.ಎನ್. ಮೂರ್ತಿರಾಯರ ಸಮಗ್ರ ಪ್ರಬಂಧಗಳು ಸಂಘದ ಮೂಲಕ ಪ್ರಕಟವಾಗಿವೆ. ಬೇಂದ್ರೆ ಕಾವ್ಯ ಕುರಿತ ಉಪನ್ಯಾಸ ಮಾಲೆಯ ಪುಸ್ತಕಗಳು ಬೇಂದ್ರೆಯಂಥಾ ಮಹಾನ್ ಕವಿಗೆ ಸಲ್ಲಿಸಿರುವ ಅನನ್ಯ ರೀತಿಯ ಗೌರವ. ಬೇಂದ್ರೆ ಸ್ಮಾರಕ ಅಂತರ ಕಾಲೇಜು ಕವನ ಸ್ಪರ್ಧೆಯಲ್ಲಿ ಅನೇಕ ಯುವ ಕವಿಗಳು ಹೊರಬಂದಿದ್ದಾರೆ. ಆ ಸ್ಪರ್ಧೆಯಲ್ಲಿ ಇಂದು ಬಹುಮಾನ ಪಡೆಯುವುದು ಒಂದು ಪ್ರತಿಷ್ಠೆಯ ವಿಷಯವಾಗಿದೆ. ಈ ಬಹುಮಾನಿತ ಕವಿಗಳನ್ನು ಕನ್ನಡ ಕಾವ್ಯ ಆಸೆಗಣ್ಣಿನಿಂದ ನೋಡುತ್ತದೆ. ಈ ಸ್ಪರ್ಧೆ ಗಟ್ಟಿ ಪ್ರತಿಭೆಗಳನ್ನು ಕನ್ನಡ ಕಾವ್ಯಕ್ಕೆ ಶೋಧಿಸಿ ನೀಡುತ್ತಿದೆ.

ಕ್ರೈಸ್ಟ್ ಕಾಲೇಜು ಹೊರತಂದಿರುವ ಎಚ್.ಎಸ್. ರಾಘವೇಂದ್ರರಾವ್ ಅದರ 'ವಿಶ್ಲೇಷಣೆ' ವಿಮರ್ಶೆಯ ಪುಸ್ತಕ, ಎಚ್.ಎಸ್. ಶಿವಪ್ರಕಾಶರ, ಮಳೆಬಿದ್ದ ನೆಲದಲ್ಲಿ ಕವನ ಸಂಕಲನ, ಕೆ. ಸತ್ಯನಾರಾಯಣ ಅವರ 'ನಮ್ಮ ಪ್ರೀತಿಯ ಕ್ರಿಕೆಟ್' ಪ್ರಬಂಧ ಸಂಕಲನಗಳು ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ಗಳಿಸಿದರೆ ಈಚೆಗೆ ಎಚ್. ಎಸ್. ರಾಘವೇಂದ್ರರಾವ್ ಬರೆದ 'ನಿಲುವು' ಪುಸ್ತಕಕ್ಕೆ ಪ್ರೊ॥ ಎಂ. ವಿ. ಇನಾಂದಾರ್ ಪ್ರಶಸ್ತಿ ದೊರಕಿದೆ. ಇವುಗಳೆಲ್ಲದರ ಹಿಂದೆ ನಿಂತು ಕೆಲಸ ಮಾಡುವ ಟಿ. ಶ್ರೀನಿವಾಸರಾಜು ಅವರ ನಿರಂತರ ಪರಿಶ್ರಮ ಇದಕ್ಕೆಲ್ಲಾ ಕಾರಣವಾಗಿದೆ. ಕ್ರೈಸ್ ಕಾಲೇಜ್ ಕನ್ನಡ ಸಂಘವನ್ನು ಮತ್ತು ರಾಜು ಅವರನ್ನು ಅಭಿನಂದಿಸಲೇ ಬೇಕು.

ಶೇಷಾದ್ರಿಪುರಂ ಕಾಲೇಜು ಕನ್ನಡ ಸಂಘದ ವತಿಯಿಂದ ಕೆಲವು ವರ್ಷಗಳ ಕಾಲ 20ಕ್ಕೂ ಹೆಚ್ಚು ಪುಸ್ತಕಗಳು ಪ್ರಕಟಗೊಂಡವು. ಇದರ ಹಿಂದೆ ಪ್ರೇರಕವಾಗಿ ನಿಂತವರು ನರಹಳ್ಳಿ ಬಾಲಸುಬ್ರಹ್ಮಣ್ಯ ಮತ್ತು ಎಂ. ವಿ. ಸತ್ಯನಾರಾಯಣ ಅವರುಗಳು. ಈ ಕಾಲೇಜು ಕನ್ನಡ ಸಂಘವು ಎಚ್.ಎಸ್. ವೆಂಕಟೇಶಮೂರ್ತಿಯವರ 'ಸಿಂದಬಾದನ ಆತ್ಮಕತೆ', ರಾಘವೇಂದ್ರ ಪಾಟೀಲರ 'ಒಡಪುಗಳು' ರಾಜರತ್ನಂ ಕುರಿತು ರಾ. ಶಿ. ಯವರ ಬರಹ, ವಿ.ಸೀ. ಅವರ 'ಹಗಲು ಇರುಳು' ಹೇಮಾ ಪಟ್ಟಣಶೆಟ್ಟಿಯವರ ಕವಿತೆಗಳು ಮುಂತಾದ ಅನೇಕ ಪುಸ್ತಕಗಳನ್ನು ಕೆಲವು ಕಾಲದ ಹಿಂದೆ ಪ್ರಕಟಿಸಿತ್ತು. ಆದರೆ ಈಗ ಪ್ರಕಟಣಾ ಕಾರ್ಯ ನಿಂತಿದೆ. ಹಿರಿ ಕಿರಿಯ ಬರಹಗಾರರ ಬರಹಗಳನ್ನು ಪ್ರಕಟಿಸುವ ಮೂಲಕ ಹೊಸ ತಲೆಮಾರಿನ ಶೋಧ ಹಳೆ ತಲೆಮಾರಿನ ದಾಖಲೆಯ ಕೆಲಸ ನಡೆಸಿದ ಶೇಷಾದ್ರಿಪುರಂ ಕಾಲೇಜು ಪ್ರಕಟಣಾ ಚಟುವಟಿಕೆ ಮತ್ತೆ ಆರಂಭವಾಗಬಹುದೆ ? ಕಾದು ನೋಡಬೇಕು.

ಸೈಂಟ್ ಜೋಸೆಫ್ ಕಾಮರ್ಸ್ ಕಾಲೇಜಿನಲ್ಲಿ ಕನ್ನಡ ಸಂಘ ಆರಂಭಿಸಿ ಅನೇಕ ಸಾಹಿತ್ಯ ಚಟುವಟಿಕೆಯ ಜೊತೆ ವಿದ್ಯಾರ್ಥಿ ಪ್ರತಿಭಾ ಪ್ರಕಾಶನಕ್ಕೆ ಮೀಸಲಾದ ಪ್ರಕಟನಾ ಮಾಲೆಯನ್ನು ಆ ಕಾಲೇಜಿನ ಉಪನ್ಯಾಸಕ ಡಾ॥ ಎಚ್. ಎಸ್. ವೆಂಕಟೇಶಮೂರ್ತಿ 1980 ರಿಂದ ನಡೆಸಿಕೊಂಡು ಬಂದಿದ್ದಾರೆ. 'ಭರವಸೆ' 'ಆಲ್ಬರ್ಟ್ ಕಾಮು' ಕುರಿತ ಪುಸ್ತಕ 'ಕಾದಂಬರಿ', ಕಾರಂತರ' ಅಳಿದ ಮೇಲೆ' ಕಾದಂಬರಿ ಕುರಿತು, 'ನಿರಾಕರಣ'ದ ಬಗ್ಗೆ, 'ಸುತ್ತಮುತ್ತ' ಎನ್ನುವ ಪ್ರಬಂಧ ಸಂಕಲನ, ಪ್ರಯತ್ನ ಎನ್ನುವ ಪ್ರಾಯೋಗಿಕ ವಿಮರ್ಶಾ ಸಂಕಲನ ಹೀಗೆ ಅನೇಕ ಪುಸ್ತಕಗಳನ್ನು ವಿದ್ಯಾರ್ಥಿಬರಹಗಾರರನ್ನು ಪ್ರೋತ್ಸಾಹಿಸುವ ಸಲುವಾಗಿ ಹೊರತರಲಾಗಿದೆ.

ಹದಿನೈದು ವರ್ಷ ಪೂರೈಸಿ ಹದಿನಾರರ ಪುತ್ತೂರಿನ ಸಂತ ಫಿಲೋಮಿನಾ ಕಾಲೇಜು ಕನ್ನಡ ಸಂಘ, ಮತ್ತೊಂದು ಹೆಸರಿಸಲೇ ಬೇಕಾದ ಸಂಘ. ಇದರಲ್ಲಿ ಈವರೆಗೂ ಸುಮಾರು 26 ಪುಸ್ತಕಗಳನ್ನು ಹೊರ ತರಲಾಗಿದೆ. ಚೈತನ್ಯ ಮಾಲೆಯಲ್ಲಿ 16 ಪುಸ್ತಕಗಳು ಪ್ರಕಟವಾಗಿದ್ದು ಅವುಗಳಲ್ಲಿ ಸುಖದ ದಾರಿ, ಯುರೋಪ್ ನೆನಪುಗಳು ಸಾಹಿತ್ಯ ಅಕಾಡಮಿಯ ಪ್ರಶಸ್ತಿಯನ್ನೂ ಶಿಲ್ಪವಿನ್ಯಾಸ ಪ್ರೊ॥ ಎಂ. ವಿ. ಇನಾಂದಾರ್ ಪ್ರಶಸ್ತಿಯನ್ನೂ ಗಳಿಸಿವೆ. ಇದಲ್ಲದೆ ಹನ್ನೆರಡು ಪುಸ್ತಕಗಳು ವಿಶೇಷ ಪ್ರಕಟಣೆಯಾಗಿ ಹೊರ ಬಂದಿವೆ. ಕೆದಂಬಾಡಿ ಜತ್ತಪ್ಪರೈ ಅವರ ಬೇಟೆಯ ನೆನಪುಗಳು, ಶೇಣಿ ಗೋಪಾಲಕೃಷ್ಣ ಭಟ್ಟರ 'ಯಕ್ಷಗಾನ ಮತ್ತು ನಾನು',

ಜಯಪ್ರಕಾಶ ಮಾವಿನಕುಳಿಯವರ 'ಶೇಫಲಿಕಾ' (ನಾಟಕ) ಮುಂತಾದವು ವಿಶೇಷ ಮಾಲೆಯ ವಿಶಿಷ್ಟ ಕೃತಿಗಳು. ಎಸ್.ಆರ್. ಚಂದ್ರ ಅವರ 'ತೋಚಿದ್ದು-ಬಾಚಿದ್ದು' ಫಿಲೋಮಿನಾ ಕಾಲೇಜಿನ ಇತ್ತೀಚಿನ ಪ್ರಕಟಣೆ.

ಪುತ್ತೂರಿನ ವಿವೇಕಾನಂದ ಕಾಲೇಜು ತನ್ನ ಕನ್ನಡ ಸಂಘದ ಮೂಲಕ ಶ್ರೀ ಕೃಷ್ಣ ಜೆನ್ನಂಗೋಡರ 'ಅ(ನ)ಪೇಕ್ಷಿತ', ತಾಳ್ತಜೆ ವಸಂತಕುಮಾರರ 'ಸಿಂಗಾರ' (ವಿಮರ್ಶೆ) ಮುಂತಾದ ವಿಶಿಷ್ಟವಾದ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ.

ಈಚೆಗೆ ತನ್ನ ಪ್ರಕಟಣೆಯನ್ನು ಆರಂಭಿಸಿದ ಬೆಂಗಳೂರಿನ ಜ್ಯೋತಿನಿವಾಸ್ ಕಾಲೇಜು ಕನ್ನಡ ಸಂಘ 'ಬೆಳ್ಳಿ ಬಾಗಿನ' ಎನ್ನುವ ಲೇಖಕಿಯರ ಕಥಾ ಸಂಕಲನ ಹೊರ ತರುವ ಮೂಲಕ ಉತ್ಸಾಹದಿಂದ ಮೊದಲ ಹೆಜ್ಜೆ ಇಟ್ಟಿದೆ. ಇದೇ ರೀತಿ ಕಾಲೇಜು ಕವಿಗಳ ಸ್ಪರ್ಧೆ ನಡೆಸಿ ಪ್ರೋತ್ಸಾಹಿಸುವ ಕೆಲಸವನ್ನು ಬೆಂಗಳೂರಿನ ಎಂ.ಇಎಸ್. ಕಾಲೇಜು, ಹೊಸಪೇಟೆ ವಿಜಯನಗರ ಕಾಲೇಜು ಮತ್ತು ಬೆಂಗಳೂರು ವಿದ್ಯಾವರ್ಧಕ ಕಾಲೇಜುಗಳು ಮಾಡಿದೆ. ಈ ಕಾಲೇಜು ಕನ್ನಡ ಸಂಘಗಳು ನಡೆಸುವ ಸ್ಪರ್ಧೆಗಳು ಹೊಸ ಬರಹಗಾರರಿಗೊಂದು ಸವಾಲು. ಜೊಳ್ಳು ಬರಹಗಳೇ ವಿಪುಲವಾಗಿ ಬರುತ್ತಿರುವ ಇವತ್ತಿನ ಸಾಹಿತ್ಯ ಸಂದರ್ಭದಲ್ಲಿ ಈ ರೀತಿಯ ಶೋಧನೆ ಮತ್ತು ಪ್ರೋತ್ಸಾಹ ಹೆಚ್ಚು ಅರ್ಥಪೂರ್ಣವೆನ್ನಿಸುತ್ತದೆ.

ಕನ್ನಡ ಪುಸ್ತಕಗಳ ಪ್ರಕಟಣೆಯ ಕೆಲಸದಲ್ಲಿ ಕಾಲೇಜು ಕನ್ನಡ ಸಂಘಗಳು ವಿಶಿಷ್ಟಪಾತ್ರ ವಹಿಸುತ್ತಿವೆ. ಯಾವುದೇ ರೀತಿಯ ವ್ಯಾಪಾರಿ ಉದ್ದೇಶಗಳಿಲ್ಲದೆ, ಉತ್ತಮವಾದ ಗಂಭೀರವಾದ ಸಾಹಿತ್ಯವನ್ನು ಓದುಗರಿಗೆ ಪರಿಚಯ ಮಾಡಿಸುವ ಕೆಲಸ ನಿರಂತರವಾಗಿ ನಡೆಸಿಕೊಂಡು ಬಂದಿದೆ. ಅನೇಕ ಹೊಸ ಕವಿಗಳನ್ನು ಬರಹಗಾರರನ್ನು ತಲೆಮಾರಿನಿಂದ ತಲೆಮಾರಿಗೆ ನಿರಂತರವಾಗಿ ಪರಿಚಯಿಸುತ್ತಾ ಅವರಲ್ಲಿನ ಗಟ್ಟಿತನಕ್ಕೊಂದು ಸವಾಲಾಗಿ ಅವರ ಬರಹಗಳನ್ನು ಪ್ರಕಟಿಸುತ್ತಾ ಹೊಸ ಹೊಸ ಪ್ರತಿಭೆಗಳ ಶೋಧನೆ ಪ್ರತಿ ವರ್ಷವೂ ನಡೆಸಿಕೊಂಡು ಬರುತ್ತಿದೆ. ಆದರೆ ಈಗ ಏರುತ್ತಿರುವ ಬೆಲೆ ಕುಗ್ಗುತ್ತಿರುವ ಆಸಕ್ತಿ ಮನುಷ್ಯತ್ವ ಸೌಜನ್ಯಗಳ ನಡುವೆ, ಅನೇಕ ಪ್ರಕಟಣಾಕಾರ್ಯಗಳು ನರಳುತ್ತಲೇ ಬದುಕುತ್ತಿವೆ. ಒಬ್ಬರೇ ವ್ಯಕ್ತಿಯ ಅಥವಾ ಒಂದಿಬ್ಬರು ಸಮಾನ ಮನೋಧರ್ಮ, ವ್ಯಕ್ತಿಗಳ ನಿರಂತರ ಶಿಸ್ತು ಪ್ರೀತಿ ಮತ್ತು ಪ್ರಯತ್ನಗಳ ಪ್ರತೀಕವಾಗಿ ಈ ಚಟುವಟಿಕೆಗಳು ಹಲವಾರು ವರ್ಷಗಳಿಂದ ನಡೆದು ಬಂದಿವೆ. ಹಣ ಮಾಡುವುದೊಂದೇ ಬರೆಯುವ ಮತ್ತು ಪುಸ್ತಕೋದ್ಯಮದ ದಂಧೆ ಆಗಿರುವಾಗ ಈ ರೀತಿಯ ಪ್ರಾಮಾಣಿಕ ಮತ್ತು ಸತ್ವಯುತ ಪ್ರಯತ್ನಗಳು ಇವತ್ತಿನ ಬರಡು ಭೂಮಿಯಲ್ಲಿ ಓಯಸಿಸ್‌ನ ಹಾಗೆ !

---

ಶತಮಾನಗಳ ದಾಸ್ಯದಿಂದ ತೊಳಲಿದ್ದೇವೆ, ಹೊರಗಿನಿಂದ ಬಂದು ನಮ್ಮನ್ನು ತುಳಿದವರನ್ನು ಮತ್ತು ತುಳಿಯುತ್ತಿರುವವರನ್ನು ಪೂಜಿಸಿ ಪಾಪಿಗಳಾಗಿದ್ದೇವೆ. ಈಗ ಕ್ಲೈಬ್ಯವನ್ನು ದೂರ ಮಾಡಬೇಕಾದ ಕಾಲ. ನಮ್ಮ ಆಲಸ್ಯವೇ, ನಮ್ಮ ಮೃತ್ಯು. ಕನ್ನಡಿಗರು ಮೂಲೆ ಮೂಲೆಗಳಲ್ಲಿ ಉಗ್ರ ಚಳುವಳಿಯನ್ನು ಕೈಗೊಳ್ಳಬೇಕು. ಸಾಹಿತ್ಯ, ಸಂಗೀತ, ರಾಜಕಾರಣ, ಔದ್ಯೋಗ, ಸಮಾಜ ಯಾವ ಹೆಸರಿನಲ್ಲಿ ಪರಾಕ್ರಮಣ ಕಂಡು ಬಂದರೂ ಕನ್ನಡಿಗರು ಎದುರಿಸಬೇಕು.

– **ಅ. ನ. ಕೃ.**

# ಹಂಪೆಯನ್ನು 'ಕಾಣಿ'ಸಿದ ಎಂ.ಸಿ.ಎಂ.

**ಡಿ. ಶ್ರೀನಿವಾಸ**

ಹಳಗನ್ನಡ ಕಾವ್ಯವಾಗಿರಲಿ, ಹರಿಹರನ ರಗಳೆಯಾಗಿರಲಿ, ಅತ್ತಿಮಬ್ಬೆಯ ಶಾಸನವಾಗಿರಲಿ, ದಿನದ ಮೊದಲ ಘಂಟೆಯಾಗಿರಲಿ, ಕೊನೆಯ ಘಂಟೆಯಾಗಿರಲಿ ಅದೇ ಕುಗ್ಗದ ಉತ್ಸಾಹ, ಲವಲವಿಕೆ, ತನ್ಮಯತೆ, ವಿದ್ಯಾರ್ಥಿಗಳ ಮನಸ್ಸನ್ನು ಸೆರೆಹಿಡಿಯುವ ಶಕ್ತಿ ಇವೆಲ್ಲ ಒಗ್ಗೂಡಿ ಮೂಡಿ ಬಂದ ವ್ಯಕ್ತಿತ್ವವಾದ ಎಂ.ಸಿ.ಎಂ. ರವರನ್ನು ಹತ್ತಿರದಿಂದ ಕಾಣುವ ಅವಕಾಶ ನನಗೆ ದೊರೆತದ್ದು ಕನ್ನಡ ಎಂ.ಎ. ತರಗತಿಯಲ್ಲಿ, ಅವರ ವಿದ್ಯಾರ್ಥಿಯಾಗುವ ಅದೃಷ್ಟ ನನ್ನದಾದಾಗ. ಆಗಾಗ ವಿಚಾರ ಸಂಕಿರಣಗಳಲ್ಲಿ ಅವರ ಮಾತುಗಳನ್ನು ಕೇಳಿ ಪ್ರಭಾವಿತನಾಗಿದ್ದ ನಾನು ಅವರ ಮೆಚ್ಚಿನ ವಿಷಯದಲ್ಲಿ ಅವರ ವಿದ್ಯಾರ್ಥಿಯಾಗುವ ಆಸೆಯಿಂದಲೇ ಶಾಸನ ಶಾಸ್ತ್ರವನ್ನು ಆಯ್ಕೆ ಮಾಡಿಕೊಂಡೆ ಎನ್ನಬಹುದು.

ಇಂತಹ ಅಚ್ಚುಮೆಚ್ಚಿನ ಗುರುಗಳೊಡನೆ ಕರ್ನಾಟಕದ ಹೆಮ್ಮೆಯ ಸಾಂಸ್ಕೃತಿಕ ಕೇಂದ್ರಗಳಲ್ಲೊಂದಾದ ವಿಜಯನಗರ ಸಾಮ್ರಾಜ್ಯದ ಗತ ವೈಭವವನ್ನು ಸಾರುತ್ತಿರುವ ಹಂಪೆಗೆ ಪ್ರವಾಸ ಹೊರಡುವ ಅವಕಾಶ ಒದಗಿ ಬಂದಾಗಲಂತೂ ನಮ್ಮ ಆನಂದಕ್ಕೆ ಪಾರವೇ ಇರಲಿಲ್ಲ. ಎಂ.ಸಿ.ಎಂ. ಅವರ ಜೊತೆ ಪ್ರವಾಸ ಹೊರಡುವ ಕಲ್ಪನೆಯೇ ನಮಗೆಲ್ಲ ರೋಮಾಂಚನವನ್ನುಂಟುಮಾಡಿತ್ತು. ತರಗತಿಯಲ್ಲಿ ಆಗಾಗ "ಹಂಪೆಗೆ ಹೋದವರು ಹಂಪೆಯನ್ನು ನೋಡುತ್ತಾರೆಯೇ ಹೊರತು ಕಾಣುವುದಿಲ್ಲ" ಎಂಬ ಅವರ ಮಾತನ್ನು ಕೇಳುತ್ತಿದ್ದ ನಮಗೆ ಈಗ ಅವರ ಕಣ್ಣಿನಲ್ಲಿ ಹಂಪೆಯನ್ನು "ಕಾಣುವ" ತವಕ ತುಂಬಿಕೊಂಡಿತ್ತು. ಆ ಸಮಯದಲ್ಲಿ ಅವರಿಗೆ ಮಾನಸಿಕವಾಗಿ ಗೊಂದಲವನ್ನುಂಟುಮಾಡಿದ್ದ ಪರಿಸರ

ವಿದ್ದರೂ ಸಹ ಅದನ್ನು ಲೆಕ್ಕಿಸದೆ ನಮ್ಮೊಡನೆ ಹೊ
ಲಂತೂ ಹಂಪೆಯನ್ನು ಕಾಣುವ ಬಗೆಗೆ ಸ
ಉಳಿಯಲಿಲ್ಲ. ಆದರೆ ನಮ್ಮದು ಕೇವಲ ಪ್ರ
ಮಾತ್ರ ಆಗಿರದೆ "ಹರಿಹರ" ತನ್ನ ರಗಳೆಯೊ
ಹೆಸರಿಸುವ ಹಂಪೆಯ ನಾಲ್ಕು ಗಡಿಗಳನ್ನು ಗುರು
ಮೂಲ ಉದ್ದೇಶವನ್ನಿಟ್ಟುಕೊಂಡು ಬಂದು ರೀ
ಸಂಶೋಧನೆಗ ಹೊರಟ ತಂಡವಾಗಿತ್ತು.

ಹಂಪೆಯಲ್ಲಿದ್ದ ಆರು ದಿನಗಳು ನಮಗೆ
ಅನುಭವವನ್ನು ನೀಡಿದವು. ಪ್ರಾಧ್ಯಾಪಕರಾಗಿ ಎಂ.
ರವರ ಒಂದು ಮುಖವನ್ನು ಕಂಡಿದ್ದ ನಮಗೆ
ಇನ್ನೊಂದು ಮುಖ ಪರಿಚಯವಾಗಿದ್ದು ಹಂಪೆ
ಹಂಪೆಯ ಪ್ರತಿಯೊಂದು ಸ್ಥಳವನ್ನೂ ನಮಗೆ ಕಾ
ಯಾವ ಯಾವ ಸ್ಥಳವನ್ನು ಯಾವ ಹೊತ್ತಿನಲ್ಲಿ
ಬೇಕು, ಯಾವ ದೃಷ್ಟಿಯಿಂದ ನೋಡಬೇಕು ಎಂಬ
ತಿಳಿಸಿ ಅವರೇ ಸ್ವತಃ ನಮ್ಮ ಜೊತೆಗೆ ನಿಂತು ನ
ಅಲ್ಲಿಗೆ ಕರೆದೊಯ್ಯುತ್ತಿದ್ದರು. ಅವರೊಡನೆ
ಒಂದೊಂದು ನಿಮಿಷವೂ ಹೊಸ ಹೊಸ ಅನ
ರಸನಿಮಿಷಗಳಾಗಿದ್ದವು. ಅವರ ಒಂದೊಂದು ಹೆ
ಸಂಶೋಧನೆಯ ದೃಷ್ಟಿಯಿಂದ ಇಡುವಂತೆ ಭಾ
ತ್ತಿತ್ತು. ಪ್ರವಾಸದುದ್ದಕ್ಕೂ ಅವರ ಉ
ವಯಸ್ಸಿಗೂ ಮೀರಿದ ಚಟುವಟಿಕೆ, ಲ
ಯಾವುದೇ ವಿಷಯವಾಗಿರಲಿ ತನ್ಮಯವಾಗುವ
ಇವು ನಮ್ಮನ್ನು ದಂಗುಬಡಿಸುತ್ತಿದ್ದವು. ಸು
ನಲ್ಲೂ ಅವರ ಕ್ರಿಯಾಶೀಲತೆ ನಮಗೆ ಹೊಸ
ವನ್ನು ತುಂಬುತ್ತಿತ್ತು. ನಾವು ಮಾಡಬೇಕಿದ್ದ
ಹೋರಟಾಗ ನಮ್ಮನ್ನೆಲ್ಲಾ ಅವರ ಗಂಭೀರತೆಯ

ಯೊಳಕ್ಕೆ ಸೆಳೆದುಕೊಳ್ಳುತ್ತಿದ್ದವರು, ಉಳಿದ ಸಮಯ ದಲ್ಲಿ ನಮ್ಮ ಪರಿಧಿಯೊಳಕ್ಕೆ ಇಳಿದುಬಿಡುತ್ತಿದ್ದರು.

ವಿರೂಪಾಕ್ಷ ದೇವಾಲಯದ ಹಿಂಭಾಗದಲ್ಲಿ, ತುಂಗಭದ್ರೆಯ ದಡದ ಮೇಲಿದ್ದ ಒಂದು ಮಠ ನಾವು ಇಳಿದುಕೊಂಡ ಸ್ಥಳವಾಗಿತ್ತು. ರಾತ್ರಿಯಾಗುತ್ತಿದ್ದಂತೆ ಊಟಮಾಡಿ ನಾವೆಲ್ಲ ಎಂ.ಸಿ.ಎಂ. ರವರ ಸುತ್ತ ಕುಳಿತು ಅವರ ಹಿಂದಿನ ಸಂಶೋಧನೆಯ ಅನುಭವಗಳನ್ನು ಕೇಳುತ್ತಿದ್ದ ಅನುಭವವಂತೂ ಮರೆಯಲಾಗದ್ದು. ಆ ಅನುಭವವನ್ನು ವರ್ಣಿಸುವ ಅವರ ರೀತಿ, ಅದರ ಹಿಂದಿರುವ ಅಪಾರ ಶ್ರಮವನ್ನು ಉಲ್ಲೇಖಿಸುವುದರ ಜೊತೆಗೆ ಅದರ ಅನಿವಾರ್ಯತೆಯನ್ನು ಒತ್ತಿ ಹೇಳುತ್ತಾ ನಮ್ಮಲ್ಲಿ ಕುತೂಹಲ, ಆಸಕ್ತಿ ತುಂಬುತ್ತಿದ್ದ ಅವರ ವಾಣಿ ಈಗಲೂ ಕಿವಿಯಲ್ಲಿ ಗುಯ್‌ಗುಡುತ್ತದೆ. ತಣ್ಣಗೆ ಸುಯ್ ಎಂದು ಸದ್ದುಮಾಡುತ್ತಾ ಬೀಸುವ ಗಾಳಿ, ಜುಳುಜುಳನೆ ಲಯಬದ್ಧವಾಗಿ ಹರಿಯುವ ತುಂಗಭದ್ರೆ, ಮಬ್ಬುಮಬ್ಬಾದ ಬೆಳದಿಂಗಳು, ತೆರೆದ ಮಂಟಪ, ಸಣ್ಣ ದೀಪ, ಮಧ್ಯೆ ಎಂ.ಸಿ.ಎಂ. ರವರು, ಅವರ ಸುತ್ತ ಕುಳಿತ ನಾವು ಈ ಚಿತ್ರ ನೂರಾರು ವರ್ಷಗಳ ಹಿಂದಿನ ಶಿಷ್ಯರಿಂದ ಸುತ್ತುವರೆದ ವಿದ್ಯಾರಣ್ಯ ಮುನಿಯ ಕಲ್ಪನೆಯ ಚಿತ್ರ ವನ್ನು ನಮ್ಮ ಕಣ್ಣ ಮುಂದಕ್ಕೆ ತರಿಸಿತ್ತು.

ಹರಿಹರ ಹೆಸರಿಸುವ ನಾಲ್ಕು ಗಡಿಗಳಲ್ಲೊಂದಾದ ಸೋಮೇಶ್ವರ ದೇವಾಲಯವನ್ನು ಕಂಡುಹಿಡಿದದ್ದು ಒಂದು ವಿಶೇಷ ಅನುಭವ. ಆ ಸ್ಥಳದ ಸರಿಯಾದ ಪರಿಚಯವಿಲ್ಲದ ನಮ್ಮನ್ನು ಹೊತ್ತ ಎರಡು ಕಾರುಗಳು ಹಿಂದೆ ಮುಂದೆ ಸುತ್ತಾಡಿ ಅಂತೂ ಸೋಮೇಶ್ವರ ದೇವಾಲಯವಿರುವ ಸ್ಥಳವನ್ನು ಗುರುತಿಸಿ ನಿಂತವು. ಆದರೆ ಆ ದೇವಾಲಯ ಇದ್ದ ಸ್ಥಳ ಒಂದು ದೊಡ್ಡ ಬೆಟ್ಟವಾಗಿತ್ತು. ಅದನ್ನು ಹತ್ತುವ ಸಾಧ್ಯಾಸಾಧ್ಯತೆಯ ಬಗೆಗೆ ನಾವು ಚರ್ಚಿಸುತ್ತಿರುವಾಗಲೇ ಎಂ.ಸಿ.ಎಂ.ರವರು ನಮಗಿಂತ ಮುಂದೆ ಹೊರಟೇಬಿಟ್ಟರು. ತಕ್ಷಣ ನಾವೂ ಹಿಂಜರಿಯಲಾಗದೆ ಬೆಟ್ಟವನ್ನು ಹತ್ತಲು ನಿರ್ಧರಿಸಿ ಹೊರಟೆವು. ಅಂತೂ ಬೆಟ್ಟವನ್ನು ಹತ್ತಿ, ಕಲ್ಲುಮುಳ್ಳು ಗಳಿಂದ ಸುತ್ತುವರೆದಿದ್ದ ದೇವಾಲಯದೊಳಗಿನ ಲಿಂಗ ವನ್ನು ಕಂಡತಕ್ಷಣ ಬೆಟ್ಟ ಹತ್ತಿದ್ದ ನಮ್ಮ ಆಯಾಸವೆಲ್ಲಾ ಕರಗಿಹೋಗಿತ್ತು. ಅದೇ ಸೋಮೇಶ್ವರ ದೇವಾಲಯ ಎಂಬ ಉಲ್ಲೇಖವಿದ್ದ ಬರಹವೊಂದು ದೇವಾಲಯದ ಮುಂದಿನ ಬಂಡೆಯ ಮೇಲೆ ಕಂಡದ್ದೇ ತಡ ಎಂ.ಸಿ.ಎಂ. ರವರು ಎಷ್ಟು ಸಂತೋಷಪಟ್ಟರೆಂದರೆ ಚಪ್ಪಾಳೆ ತಟ್ಟಿ ಕುಣಿಯಲಿಲ್ಲ ಅಷ್ಟೆ. ಅಂದಿನ ಅವರ ಹಿಡಿದ ಕೆಲಸ ಸಾಧಿಸುವ ದೃಢತೆ, ಕೆಲಸ ಸಾಧಿಸಿದನಂತರದ ತೃಪ್ತಿ ಎರಡೂ ನಮ್ಮ ಜೀವನದಲ್ಲಿ ಎಂದೆಂದೂ ಆದರ್ಶವಾಗಿ ನಿಲ್ಲುವಂಥವು.

ನಮ್ಮ ಪ್ರವಾಸದ ಮತ್ತೊಂದು ಅಂಗವಾಗಿ ಈ ಮೊದಲು ಎಂ.ಸಿ.ಎಂ.ರವರು ಗುರುತಿಸಿದ್ದ ಚಾಮರಸನ ಗುಹೆಯಲ್ಲಿ ನಡೆದ ಘಟನೆ ರೋಮಾಂಚನಕಾರಿಯಾದ ಅನುಭವ. ಈ ಗುಹೆಯ ಒಳಗಿದ್ದ ಒಂದು ಪೀಠದ ಮೇಲೆ ಕುಳಿತು ಚಾಮರಸ ಪ್ರಭುಲಿಂಗ ಲೀಲೆಯನ್ನು ಬರೆದಿರಬಹುದು ಎಂಬ ಊಹೆ. ನಾವು ಸಹಜವಾಗಿಯೇ ಫೋಟೋ ತೆಗೆಯುವ ಉತ್ಸಾಹದಿಂದ ಎಂ.ಸಿ.ಎಂ. ರವರನ್ನು ಆ ಪೀಠದ ಮೇಲೆ ಕುಳಿತುಕೊಳ್ಳಲು ಹೇಳಿ ದೆವು. ಆನಂದ ಮತ್ತು ಜಗದೀಶ ಶಿಷ್ಯರಂತೆ ಕೆಳಗೆ ಕುಳಿತರು. ಆದರೆ ಆ ಸಮಯದಲ್ಲಿ ಎಂ.ಸಿ.ಎಂ. ರವರ ಮುಖವನ್ನು ನೋಡಿದ ನಮಗೆ, ಅವರು ಕೇವಲ ಫೋಟೋಗಾಗಿ ಕುಳಿತವರಂತೆ ಕಾಣಲಿಲ್ಲ. ಯಾವುದೋ ಅವ್ಯಕ್ತ ಗಂಭೀರತೆ ಆ ಕ್ಷಣದಲ್ಲಿ ಅವರ ಮುಖದಲ್ಲಿ ಕಾಣಿಸಿಕೊಂಡದ್ದನ್ನು ನಾವು ಗುರುತಿಸಬಹುದಾದಂತಹು ದಾಗಿತ್ತು. ಈ ತನ್ಮಯತೆ ಎಂ.ಸಿ.ಎಂ. ರವರ ಒಂದು ವಿಶಿಷ್ಟ ಗುಣ ಎಂಬುದನ್ನು ಅವರ ಪಾಠ ಕೇಳಿದ್ದ, ಅವರನ್ನು ಹತ್ತಿರದಿಂದ ಕಂಡ ಎಲ್ಲರಿಗೂ ತಿಳಿಯುವ ವಿಷಯವೇ ಆಗಿದೆ.

ನಮ್ಮ ಪ್ರವಾಸ ಮುಗಿಯುವ ಎರಡು ದಿನದ ಹಿಂದಿನ ರಾತ್ರಿ ಇದ್ದಕ್ಕಿದ್ದಂತೆ ನನ್ನ ಆರೋಗ್ಯ ಹದ ಗೆಟ್ಟಿತು. ತಕ್ಷಣ ಎಂ.ಸಿ.ಎಂ. ರವರು ಎಷ್ಟು ವಿಚಲಿತ ರಾದರೆಂದರೆ ಅವರೇ ಸ್ವತಃ ಸಮೀಪದ ಮಠದ ಸ್ವಾಮಿ ಗಳಲ್ಲಿಗೆ ಹೋಗಿ ಔಷಧಿ ತಂದು ತಮ್ಮ ಕೈಯಾರೆ ಕುಡಿಸಿ ಧೈರ್ಯ ಹೇಳಿದ್ದನ್ನು ನೆನಸಿಕೊಂಡರೆ ಅಂತಃಕರಣ ಒದ್ದೆ ಯಾಗುತ್ತದೆ. ಹೀಗಿದ್ದಾಗ್ಯೂ ಮಾರನೇ ದಿನ ಕೊಪ್ಪಳದ ಅಶೋಕನ ಶಾಸನವನ್ನು ನೋಡಲು ನಾನೂ ಹೋಗ ಬೇಕೆಂದು ಹಠ ಹಿಡಿದಾಗ, ನನ್ನ ಹಠಕ್ಕೆ ತಮ್ಮ ಸಂತೋಷ ವ್ಯಕ್ತಪಡಿಸಿ ನನ್ನ ಯೋಗಕ್ಷೇಮವನ್ನು ಶ್ರೀ ಶಿವಣ್ಣ ನವರಿಗೆ ಒಪ್ಪಿಸಿ, ಹತ್ತುಬಾರಿಯಾದರೂ ಚಿಕ್ಕಮಕ್ಕಳಿಗೆ ಹೇಳುವಂತೆ "ಹುಷಾರಾಗಿ ಹೋಗಿ ಬನ್ನಿ" ಎಂದು ಹೇಳಿದ್ದು ಈಗಲೂ ನೆನಪಿನಲ್ಲಿದೆ. ಅವರಿಗೆ ತುಂಬಾ ಮುಖ್ಯವಾದ ಕೆಲಸವಿದ್ದು ಹೊಸಪೇಟೆಯಲ್ಲಿ ಉಳಿಯ

ಬೇಕಾದ ಕಾರಣ ನಮ್ಮನ್ನು ಅವಕಾಶವಂಚಿತರನ್ನಾಗಿ ಮಾಡಲು ಇಷ್ಟ ಪಡದೆ ಕೊಪ್ಪಳಕ್ಕೆ ನಮ್ಮನ್ನೇ ಕಳುಹಿಸಿ ಕೊಟ್ಟರು. ಆದರೆ ದುರದೃಷ್ಟವಶಾತ್ ಅಲ್ಲಿಂದ ಹಿಂತಿರುಗಿದಾಗ ನಮ್ಮ ಮಿತ್ರರಲ್ಲೊಬ್ಬರು ಬಿದ್ದು ಕೈ ಪೆಟ್ಟುಮಾಡಿಕೊಂಡಿದ್ದರು. ಅದನ್ನು ನೋಡಿದಾಗಲಂತೂ ತಾವೇ ಏನೋ ತಪ್ಪು ಮಾಡಿದವರಂತೆ ಚಡಪಡಿಸಿದ ಎಂ.ಸಿ.ಎಂ. ಅವರು ಮರುಕ್ಷಣದಲ್ಲಿಯೇ ತಮ್ಮ ಜವಾಬ್ದಾರಿಯನ್ನು ಅರಿತು ನಮ್ಮಲ್ಲಿ ಧೈರ್ಯ ತುಂಬಲು ತಮಾಷೆ ಮಾಡತೊಡಗಿದರು. ಏನೋ ತಪ್ಪು ಮಾಡಿದೆವೆಂಬ ಭಾವನೆಯಿಂದ ಮಂಕಾಗಿದ್ದ ನಮ್ಮ ಮನಸ್ಸುಗಳು ಇದ್ದಕ್ಕಿದ್ದಂತೆ ತಿಳಿಯಾಗತೊಡಗಿದವು.

ಪ್ರವಾಸ ಮುಗಿದ ದಿನ ಅವರು ಅಲ್ಲೇ ಉಳಿಯಬೇಕಾಗಿ ಬಂದದ್ದರಿಂದ ನಾವು ಮಾತ್ರ ಬೆಂಗಳೂರಿಗೆ ವಾಪಸ್ಸಾಗಬೇಕಿತ್ತು. ಅಂದು ರಾತ್ರಿ ಹತ್ತು ಘಂಟೆಗೆ ಹೊರಡುವ ರೈಲಿಗೆ ಸ್ವಯಂ ಎಂ.ಸಿ.ಎಂ. ರವರೇ ನಮ್ಮ ಜೊತೆಗೆ ಬಂದು, ನಮ್ಮ ಬಳಿ ಹಣ ಕಡಿಮೆ ಇದ್ದುದರಿಂದ ತಾವೇ ಅದನ್ನು ಕೊಟ್ಟು, ನಮ್ಮನ್ನು ರೈಲಿಗೆ ಹತ್ತಿಸಿ, ರೈಲು ಹೊರಡುವವರೆಗೂ ಇದ್ದು ನಮ್ಮನ್ನು ಬೀಳ್ಕೊಟ್ಟರು. "ಹುಷಾರು" ಎಂದು ಹೇಳುವುದನ್ನು ಮರೆಯಲಿಲ್ಲ. ಮತ್ತೆ ಬೆಂಗಳೂರಿಗೆ ಬಂದ ತಕ್ಷಣ ಅವರು ಮಾಡಿದ ಮೊದಲ ಕೆಲಸವೆಂದರೆ ನಾವೆಲ್ಲಾ ಸುಖವಾಗಿ ಬಂದು ಸೇರಿದ್ದನ್ನು ತಿಳಿದು ಸಂತೋಷಪಟ್ಟದ್ದು.

ಈ ರೀತಿ ಹಿಡಿದ ಕೆಲಸ ಸಾಧಿಸುವ ದೃಢ ಮನಸ್ಸಿನ, ಮೃದು ಹೃದಯದ, ಲವಲವಿಕೆಯ, ಕ್ರಿಯಾಶೀಲ ಚೈತನ್ಯ ನಮ್ಮ ಅಚ್ಚುಮೆಚ್ಚಿನ ಎಂ.ಸಿ.ಎಂ. ರವರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳಾಗಿ ಹಂಪೆಯ ಪ್ರವಾಸ ಮಾಡಿದ ಅಂದರೆ ಅವರ ಪ್ರಕಾರವೇ ಹಂಪೆಯನ್ನು ಕಂಡ, ಹಾಗೂ ಅವರ ಜೊತೆ ಪ್ರವಾಸದಲ್ಲಿ ಪಾಲ್ಗೊಂಡ ವಿದ್ಯಾರ್ಥಿಗಳ ಕೊನೆಯ ತಂಡ ಎಂಬ ಹೆಮ್ಮೆ ನಮ್ಮದಾಗುವುದರ ಜೊತೆಗೆ ನಮ್ಮ ಮುಂದಿನ ವಿದ್ಯಾರ್ಥಿಗಳು ಇಂತಹ ಅವಕಾಶಗಳನ್ನು ಕಳೆದುಕೊಂಡರಲ್ಲಾ ಎಂಬ ವಿಷಾದವೂ ನಮ್ಮದಾಗಿದೆ.

ಕನ್ನಡಿಗರೇ, ನಾವು ನಮ್ಮ ಆಲಸ್ಯವನ್ನು ತಳ್ಳೋಣ ; ಭ್ರಾಮಕ ಕಲ್ಪನೆಗಳನ್ನು ಬಿಟ್ಟು ಬಿಡೋಣ ; ಮತ್ತು ಮುಂದಿನ ಮಾರ್ಗಕ್ಕೆ ಹತ್ತೋಣ. ಪಾತಾಳಕ್ಕಿಳಿದ ನಮ್ಮ ಕರ್ಣಾಟಕ ಆರ್ಯ ಸಂಸ್ಕೃತಿಯನ್ನು ನಾವು ಉದ್ಧರಿಸದೆ ಇನ್ನಾರು ಉದ್ಧರಿಸುವವರು ? ಕನ್ನಡಿಗರು ಹೇಡಿಗಳು, ಹಿಂದುಳಿದವರು, ಅಭಿಮಾನಶೂನ್ಯರು- ಎಂದು ಮೊದಲಾದ ಕರ್ಣಕಟುವಾದ ನುಡಿಗಳಿಂದ ನಮ್ಮನ್ನು ಚುಚ್ಚುವವರಿಗೆ ನಾವು ಕ್ರಿಯಾಶಕ್ತಿಯಿಂದ ಉತ್ತರ ಕೊಡೋಣ.

**ಆಲೂರ ವೆಂಕಟರಾಯ**

# ಅಧ್ಯಾಪಕರಾಗಿ - ಎಂ.ಸಿ.ಎಂ.

ಸಿ. ಕೆ. ಜಗದೀಶ

ಇಂದಿನ ಶಾಲಾ - ಕಾಲೇಜುಗಳಲ್ಲಿ ಸತ್ವ-ತತ್ವಗಳೆರಡನ್ನೂ ಒಳಗೊಂಡ ಅಧ್ಯಾಪಕರು ತುಂಬಾ ವಿರಳ. ಸತ್ವ ಸಹಿತವಾದರೂ ತತ್ವರಹಿತ ಅಧ್ಯಾಪಕರೇ ಇಂದು ಹೆಚ್ಚಾಗುತ್ತಿದ್ದಾರೆ. ಆದರೆ ಸತ್ವ - ತತ್ವಗಳೆರಡನ್ನೂ ಒಳಗೊಂಡು, ತಮ್ಮ ಅಧ್ಯಾಪನದಲ್ಲಿ ಆತ್ಮತೃಪ್ತಿಯನ್ನು ಕಾಣುತ್ತಾ, ಅಧ್ಯಾಪನದ ಜೊತೆಗೇ ವಿವಿಧ ಸತ್ಕಾರ್ಯಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡ ಅಧ್ಯಾಪಕರು – ಎಂ. ಸಿ. ಎಂ.

ಶ್ರೇಷ್ಠ ಸಂಶೋಧಕರಾಗಿ, ಉತ್ತಮ ವಾಗ್ಮಿಗಳಾಗಿ ಅತ್ಯುತ್ತಮ ಅಧ್ಯಾಪಕರಾಗಿ ಮೈಸೂರು, ಬೆಂಗಳೂರು ವಿ.ವಿ. ಗಳಲ್ಲಿ ಉತ್ತಮ ಸೇವೆ ಸಲ್ಲಿಸಿ ಈಗ ತಾನೇ ತಮ್ಮ ಅಧ್ಯಾಪಕ ವೃತ್ತಿಯಿಂದ ನಿವೃತ್ತರಾಗಿದ್ದಾರೆ. ಇಂತಹ ಅಧ್ಯಾಪಕರ ವಿದ್ಯಾರ್ಥಿಗಳೆಂದು ಹೇಳಿಕೊಳ್ಳುವ ಸಹಸ್ರಾರು ಮಂದಿ ವಿದ್ಯಾರ್ಥಿಗಳಲ್ಲಿ ನಾನೂ ಒಬ್ಬನೆಂದು ಹೇಳಿಕೊಳ್ಳಲು ಹೆಮ್ಮೆಯೆನಿಸುತ್ತಿದೆ.

1953 ರಲ್ಲಿಯೇ ಅಧ್ಯಾಪನದಲ್ಲಿ ತೊಡಗಿದ ಇವರು ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ, ತಮ್ಮ 35 ವರ್ಷಗಳ ಅನುಭವ ಪೂರ್ಣ ಸೇವೆ ಸಲ್ಲಿಸುತ್ತಿದ್ದ ಸಮಯದಲ್ಲಿ ಅವರ ವಿದ್ಯಾರ್ಥಿಯಾಗುವ ಸದವಕಾಶ ನನಗೆ ದೊರೆಯಿತು. ಆ ಎರಡು ವರ್ಷಗಳಲ್ಲಿ ಅವರಿಂದ ಕಲಿತದ್ದು ಅಪಾರ.

ನನ್ನ ಮೊದಲನೇ ವರ್ಷದ ಎಂ.ಎ,. ತರಗತಿಯಲ್ಲಿ ಅವರು ನಮಗೆ ಬೋಧಿಸುತ್ತಿದ್ದ ಪಠ್ಯ ಮಧ್ಯಕಾಲೀನ ಸಾಹಿತ್ಯ. ಆ ವರ್ಷ ಒಂದು ವಾರಕ್ಕೆ ಎರಡು ತರಗತಿಗಳಲ್ಲಿ ಅವರ ಪಾಠವನ್ನು ಕೇಳುವ ಭಾಗ್ಯ ನಮ್ಮದಾಗಿತ್ತು. 'ಮಹಾದೇವಿಯಕ್ಕನ ರಗಳೆ' ಮತ್ತು 'ಅಲ್ಲಮನ ವಚಗಳ' ನ್ನು ಅವರು ಬೋಧಿಸುತ್ತಿದ್ದರು. ಸದಾ ಲವಲವಿಕೆಯಿಂದ, ಉತ್ಸಾಹದಿಂದ ಪಾಠ ಮಾಡುತ್ತಿದ್ದ ಎಂ. ಸಿ. ಎಂ. ರವರ ತರಗತಿಯೆಂದರೆ ವಿದ್ಯಾರ್ಥಿಗಳಿಗೆ ಬಲು ಆಸಕ್ತಿ. ಎಲ್ಲಾ ವಿದ್ಯಾರ್ಥಿಗಳಿಗೂ ಅರ್ಥವಾಗುವಂತೆ, ನಿಧಾನವಾಗಿ ಪಠ್ಯವನ್ನು ವಾಚನ ಮಾಡುತ್ತಾ, ವ್ಯಾಖ್ಯಾನಿಸುತ್ತಾ ಮುಂದುವರಿಸುತ್ತಿದ್ದ ಅವರ ಬೋಧನಾ ವಿಧಾನವಂತೂ ಅನುಕರಣೀಯ. ಸ್ನಾತಕೋತ್ತರ ಮಟ್ಟದ ವಿದ್ಯಾರ್ಥಿಗಳಿಗೂ ಕೂಡ 'ಅರ್ಥವಾಗಿದೆಯೇ' ಎಂದು ಕೇಳಿ–ಒಮ್ಮೆ ಅರ್ಥ ಸ್ಪಷ್ಟಪಡಿಸಿಕೊಳ್ಳದವರಿಗೆ ಮತ್ತೊಮ್ಮೆ ಸುಲಭವಾಗಿ ಅರ್ಥೈಸುತ್ತಾ ಸ್ಪಷ್ಟಪಡಿಸಿ ಪಾಠ ಮುಂದುವರಿಸುತ್ತಿದ್ದರು. ಅವರ ಪಾಠ ಎಂದೂ ಯಾವ ವಿದ್ಯಾರ್ಥಿಗಳಿಗೂ ನೀರಸವೆನಿಸಿದ್ದೇ ಇಲ್ಲ.

ಅಲ್ಲಮನ ವಚನಗಳನ್ನು ವ್ಯಾಖ್ಯಾನಿಸುತ್ತಿದ್ದ ಅವರ ಸರಳ ರೀತಿಯನ್ನಂತೂ ನಾನು ಎಂದಿಗೂ ಮರೆಯಲಾರೆ. ಸಂಧ್ಯಾಭಾಷೆಯ ಬೆಡಗಿನವಚನಗಳು ನಾವೇ ಓದಿದಾಗ ಸ್ವಲ್ಪವೂ ಅರ್ಥವಾಗುತ್ತಿರಲಿಲ್ಲ. ಅವುಗಳ ವಾಚ್ಯಾರ್ಥವಷ್ಟೇ ನಮಗೆ ತಿಳಿಯುತ್ತಿತ್ತು. ಆದರೆ ಒಂದೊಂದು ವಚನವನ್ನೂ ಸುಮಾರು ಒಂದು ಪೀರಿಯಡ್‌ನಲ್ಲಿ ವಿವರಿಸುತ್ತಾ ಆ ವಚನದಲ್ಲಡಗಿರುವ ಅಂತರಾರ್ಥವನ್ನು ಪ್ರತಿಯೊಬ್ಬ ವಿದ್ಯಾರ್ಥಿಯ ಮನ ಮುಟ್ಟುವಂತೆ ಬೋಧಿಸುತ್ತಿದ್ದರು. "ವಚನಗಳ ಬಗೆಗೆ ಅದರಲ್ಲಿಯೂ ಅಲ್ಲಮನ ವಚನಗಳ ಬಗೆಗೆ ಒಟ್ಟಾರೆಯಾಗಿ ಮಾತನಾಡುವುದು ಸುಲಭ, ಆದರೆ ಒಂದೊಂದೇ ವಚನವನ್ನು ಆಯ್ದುಕೊಂಡು ಪದಶಃ ವ್ಯಾಖ್ಯಾನಿಸುವುದು ಕಷ್ಟ ಸಾಧ್ಯ" ಎಂದು ಹೇಳುತ್ತಿದ್ದ ಅವರ ಮಾತು ನಿಜ. ಇಂದಿಗೂ ನಮ್ಮಲ್ಲಿ ಅಲ್ಲಮನ ವಚನಗಳಿಗೆ ಸರಿಯಾದ ರೀತಿಯಲ್ಲಿ ವ್ಯಾಖ್ಯಾನ ಮಾಡಬಲ್ಲವರು ತುಂಬಾ

ಕಡಿಮೆ. ಎಂ. ಸಿ. ಎಂ. ರವರೇ ಹೇಳುವಂತೆ "ಅಲ್ಲಮನ ವಚನಗಳಲ್ಲಿ ಅಲ್ಲಮತ್ವಕ್ಕಿಂತ ಪ್ರಭುತ್ವ ಹೆಚ್ಚು" ಎಂಬುದು ಅವನ ವಚನಗಳನ್ನು ಓದಿದವರಿಗೆ ಸತ್ಯವೆನಿಸುತ್ತದೆ. ಅಂತಹ ಪ್ರಭುತ್ವದ ವಚನಗಳನ್ನು ಪ್ರತಿಯೊಬ್ಬರಿಗೂ ಸರಳವಾಗಿ ಅರ್ಥಮಾಡಿಸುವುದು ಸುಲಭ ಸಾಧ್ಯವೇನಲ್ಲ. ನಾನು ಇದುವರೆಗೂ ಪ್ರಭುವಿನ ವಚನಗಳನ್ನು ಕುರಿತಂತೆ ಸುಲಭವಾಗಿ ಮತ್ತು ತುಂಬಾ ಸ್ಪಷ್ಟವಾಗಿ ವಿವರಿಸುವವರಲ್ಲಿ ಎಂ. ಸಿ. ಎಂ. ರವರಂತಹ ಅಧ್ಯಾಪಕರನ್ನು ಕಂಡಿಲ್ಲ. ವಚನಗಳನ್ನು ಮಾತ್ರವಲ್ಲ, ಯಾವುದೇ ಕಾವ್ಯವನ್ನಾದರೂ ರಸವತ್ತಾಗಿ ಅವರು ಬೋಧಿಸುತ್ತಿದ್ದರು. 'ಮಹದೇವಿಯಕ್ಕನ ರಗಳೆ' ಯ ಬಗ್ಗೆ ಹೇಳುವಾಗ ಪ್ರಾಸಂಗಿಕವಾಗಿ ಅವರು ನೀಡುತ್ತಿದ್ದ ವಿವಿಧ ಕಾವ್ಯಗಳ ಉದಾಹರಣೆಗಳೂ, ಜೊತೆಗೆ ಅವರು ಆ ಪಠ್ಯಕ್ಕೆ ಸಂಬಂಧಿಸಿದ ವಿಷಯಗಳಿಗೆ ಶಾಸನ ಮೊದಲಾದವುಗಳಿಂದ ಆರಿಸಿ ಹೇಳುತ್ತಿದ್ದ ಸೂಕ್ತ ನಿದರ್ಶನಗಳೂ ಅವರ ಪಾಠವನ್ನು ಪರಿಣಾಮಕಾರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತಿದ್ದವು.

ಪ್ರತಿಯೊಬ್ಬ ವಿದ್ಯಾರ್ಥಿಯೂ ಲವಲವಿಕೆಯಿಂದ ಕುಳಿತು ಪಾಠ ಕೇಳುವಂತೆ ಅವರ ಬೋಧನಾಕ್ರಮವಿರುತ್ತಿತ್ತು. ಸರಿಯಾದ ರೀತಿಯಲ್ಲಿ ಎಲ್ಲಾ ವಿದ್ಯಾರ್ಥಿಗಳೂ ಅವರ ಪಾಠಕ್ಕೆ ಸ್ಪಂದಿಸುತ್ತಿದ್ದರು. ವಿದ್ಯಾರ್ಥಿಗಳನ್ನು ಎಂದೂ ಎಂ. ಸಿ. ಎಂ. ಕಟುವಾಗಿ ಮಾತನಾಡಿ ನೋಯಿಸಿದ್ದಿಲ್ಲ. ಎಲ್ಲರನ್ನೂ ಮಮತೆಯಿಂದ ನೋಡುವ ಎಂ.ಸಿ.ಎಂ. ಯಾರನ್ನೂ ದಡ್ಡರೆಂದು ಗುರುತಿಸುವುದಿಲ್ಲ. ಪ್ರತಿಯೊಬ್ಬನ ಗ್ರಹಿಕೆಯ ಸಾಮರ್ಥ್ಯವನ್ನು ಅರಿತು ಅವನ ಮಟ್ಟಕ್ಕೇ ಇಳಿದು ಅಂತಹವನಿಗೂ ಅರ್ಥವಾಗುವಂತೆ ಅವರು ಹೇಳಿಕೊಡುತ್ತಿದ್ದರು.

ನನ್ನ ಎರಡನೇ ವರ್ಷದ ಎಂ. ಎ.,ಗೆ ಹೋಗುವ ಮೊದಲೇ ಎಂ. ಸಿ. ಎಂ. ರವರ ಶಾಸನ ಪಾಂಡಿತ್ಯದ ಬಗೆಗೆ ಕೇಳಿದ್ದ ನಾನು-ಶಾಸನ ಶಾಸ್ತ್ರವನ್ನೇ ಐಚ್ಛಿಕವಾಗಿ ಆರಿಸಿಕೊಳ್ಳಬೇಕೆಂದು ನಿರ್ಧರಿಸಿದ್ದೆ. ಶಾಸನ ಶಾಸ್ತ್ರವೆಂದರೇನೇ ಅಂಜಿಕೊಳ್ಳುತ್ತಿದ್ದ ನನ್ನ ಬಹುಮಂದಿ ಸಹಪಾಠಿಗಳು, ಎಂ. ಸಿ. ಎಂ. ಶಾಸನಗಳ ಬಗೆಗೆ ಬೋಧಿಸುವರೆಂದು ತಿಳಿದು ತಮ್ಮ ಐಚ್ಛಿಕ ವಿಷಯಗಳನ್ನು ಮತ್ತೆ ಮತ್ತೆ ಬದಲಾವಣೆ ಮಾಡಿಕೊಂಡು ಶಾಸನ ಶಾಸ್ತ್ರಾಧ್ಯಯನಕ್ಕೆ ತೊಡಗಿದ್ದುಂಟು.

ಶಾಸನಗಳ ಬಗೆಗೆ ಬೋಧಿಸುವಾಗಲೂ ಎಂ.ಸಿ.ಎಂ. ಎಂದೂ ನಮಗೆ 'ಶಾಸನಶಾಸ್ತ್ರ' ಕ್ಲಿಷ್ಟವೆನಿಸುವಂತೆ ಬೋಧಿಸಲಿಲ್ಲ. ಯಾವುದೇ ಶಾಸನದ ಬಗೆಗೇ ಆಗಲಿ ಅಧಿಕಾರವಾಣಿಯಿಂದ ಮಾತನಾಡುತ್ತಿದ್ದ ಎಂ.ಸಿ.ಎಂ. ರವರಿಂದ ಶಾಸನ ಪಾಠ ಕೇಳಿದ ನಾವು ಧನ್ಯರೆಂಬ ಭಾವ ನಮಗಾಗ ಬರುತ್ತಿತ್ತು. ಸಂಸ್ಕೃತ ಶ್ಲೋಕಗಳಾಗಲೀ, ಶಾಸನಸ್ಥವಾದ ಪೂರ್ವದ ಹಳಗನ್ನಡವಾಗಲೀ ನಮಗೆ ಓದಲೂ ಕೂಡ ಬರದಂತಹ ಕಡೆ ನಿಧಾನವಾಗಿ ಬಿಡಿ ಬಿಡಿಸಿ ಓದಿ ಶಾಸನಗಳ ಪಾಠವನ್ನು ವಿವರಿಸುತ್ತಿದ್ದರು. ಯಾವುದೇ ಶಾಸನ ಪಾಠ ನಮಗೆ ಸುಲಭವಾಗಿ ಅರ್ಥವಾಗದೇ ಹೋದಾಗ, ಆ ಸಾಲುಗಳನ್ನು ಕಪ್ಪು ಹಲಗೆಯ ಮೇಲೆ ಬರೆದು ಸಾವಕಾಶವಾಗಿ ಬಿಡಿಸಿ, ಸುಸ್ಪಷ್ಟಪಡಿಸಿ ಮುಂದುವರಿಯುತ್ತಿದ್ದರು. ಪ್ರತಿಯೊಂದು ಕಠಿಣ ಪದಗಳನ್ನು ಬರೆದು ತೋರಿಸುತ್ತಾ ಅಂತಹ ಪದಗಳ ನಿಷ್ಪತ್ತಿಯ ಬಗೆಗೂ ವಿವರಿಸಿ ಅವು ನಮ್ಮ ಮನಸ್ಸಿನಲ್ಲಿ ಉಳಿಯುವಂತೆ ಮಾಡುತ್ತಿದ್ದರು. ಸ್ನಾತಕೋತ್ತರ ವ್ಯಾಸಂಗದ ಮಟ್ಟದಲ್ಲಿಯೂ ಕಪ್ಪು ಹಲಗೆಯ ಬಳಕೆಯನ್ನು ಹೆಚ್ಚಾಗಿ ಮಾಡುತ್ತಿದ್ದ ಎಂ. ಸಿ. ಎಂ. ಕೆಲವು ಬಾರಿ ವಿದ್ಯಾರ್ಥಿಗಳಿಂದಲೇ ಕಪ್ಪುಹಲಗೆಯ ಮೇಲೆ ಬರೆಸಿದ್ದುಂಟು.

ಎಂ.ಸಿ.ಎಂ. ಪ್ರತಿಯೊಬ್ಬ ವಿದ್ಯಾರ್ಥಿಗೂ ಒಂದಲ್ಲ ಒಂದು ರೀತಿಯಲ್ಲಿ ಕ್ರಿಯಾಶೀಲ ಮನೋಭಾವನೆಯನ್ನು ಬೆಳೆಸಿಕೊಳ್ಳಲು ಅವಕಾಶ ಮಾಡಿಕೊಡುತ್ತಿದ್ದರು. ಕೆಲವು ವಿಷಯಗಳ ಬಗೆಗೆ ಹೇಳುವಾಗ ಅವರು ಭಾವುಕರಾದವರಂತೆ ಕಂಡುಬರುತ್ತಿದ್ದುದುಂಟು. ಅಶೋಕನ ಮೂರು ಶಾಸನಗಳನ್ನು ನಮಗೆ ಸರಳವಾದ ರೀತಿಯಲ್ಲಿ ಅರ್ಥೈಸುತ್ತಾ ಅವರು ನೀಡುತ್ತಿದ್ದ ವಿವರಣೆ ಎಂದಿಗೂ ಮರೆಯುವಂತಿಲ್ಲ. ಅವರು ಬೋಧಿಸುತ್ತಿದ್ದಾಗ ಕೆಲವು ಟಿಪ್ಪಣಿ ಮಾಡಿಕೊಳ್ಳಲು ಸೂಚಿಸುತ್ತಿದ್ದರು. ಪಠ್ಯಕ್ಕೆ ಸಂಬಂಧಿಸಿದಂತೆ ವಿದ್ಯಾರ್ಥಿಗಳಿಗೆ ಕೆಲವು ವಿಷಯಗಳನ್ನು ಆ ಬಗ್ಗೆ ನೀಡಿ ಬರೆದುತರಲು ಹೇಳುತ್ತಿದ್ದರು. ವಿದ್ಯಾರ್ಥಿಗಳಲ್ಲಿ ಸಂಶೋಧನಾ ಪ್ರಜ್ಞೆ ಬೆಳೆಯಬೇಕಾದರೆ ಎಷ್ಟೆಲ್ಲಾ ಆಸಕ್ತಿ ಇರಬೇಕೆಂಬ ಬಗೆಗೆ ಹೇಳುತ್ತಲೇ ವಿದ್ಯಾರ್ಥಿಗಳಿಗೆ ಸಂಶೋಧನಾ ಪ್ರೇಮ ಹುಟ್ಟಿಸುತ್ತಿದ್ದರು. ಯಾವುದೇ ವಿದ್ಯಾರ್ಥಿ ಏನೇ ಬರೆದು ತಂದೊಪ್ಪಿಸಿದರೂ ಅದನ್ನು ನಿಧಾನವಾಗಿ ಓದಿ, ತಿದ್ದಿ, ತಿಳಿಹೇಳುತ್ತಿದ್ದ ಎಂ.ಸಿ.ಎಂ.

ವಿದ್ಯಾರ್ಥಿಗಳ ಪ್ರತಿಭೆ ಎಂದೂ ಮುರುಟಿ ಹೋಗಲು ಬಿಟ್ಟವರೇ ಅಲ್ಲ. ಹಳ್ಳಿಯ ವಿದ್ಯಾರ್ಥಿಗಳಾಗಿದ್ದರಂತೂ ಅಂತಹವರಿಗೆ ತಮ್ಮ ತಮ್ಮ ಹಳ್ಳಿಗಳಲ್ಲಿ ಕಂಡುಬರುವ ಶಾಸನಗಳ ಬಗೆಗೆ, ದೊರೆಯುವ ತಾಳೆಯೋಲೆ ಪ್ರತಿಗಳ ಬಗೆಗೆ ಆಸಕ್ತಿವಹಿಸಿ ಕೆಲಸ ಮಾಡುವಂತೆ ಸೂಚಿಸಿ, ಅವರು ಕ್ರಿಯಾಶೀಲರಾಗುವಂತೆ ಪ್ರೋತ್ಸಾಹಿಸುತ್ತಿದ್ದರು.

ಕನ್ನಡ ನಾಡು, ನುಡಿ, ಸಂಸ್ಕೃತಿಗಳ ಬಗೆಗೆ ಅಗಾಧ ಪ್ರೇಮವುಳ್ಳ ಎಂ.ಸಿ.ಎಂ. ತಮ್ಮನ್ನು ಕನ್ನಡ ಪರ ಕಾರ್ಯ ಗಳಲ್ಲಿ ಆಗಲೇ ತೊಡಗಿಸಿಕೊಂಡಿದ್ದರಾದರೂ ಎಂದಿಗೂ ತಮ್ಮ ತರಗತಿಗಳಿಗೆ ತಪ್ಪಿಸಿಕೊಂಡಿದ್ದಿಲ್ಲ. ಯಾವುದೋ ಮುಷ್ಕರದಿಂದಲೋ, ರಜಾ ದಿನವಾದುದರಿಂದಲೋ ತರಗತಿಯೊಂದು ತಪ್ಪಿಹೋದರೆ ಆ ಮರು ದಿನವಲ್ಲಿಯೇ ವಿಶೇಷ ತರಗತಿ ತೆಗೆದುಕೊಳ್ಳುತ್ತಿದ್ದವರು ಎಂ.ಸಿ.ಎಂ. ತರಗತಿಯಿಲ್ಲದಿರುವಾಗ ಬಿಡುವಿನ ಸಮಯದಲ್ಲಿಯೂ ವಿದ್ಯಾರ್ಥಿಗಳು ಅವರ ಕೊಠಡಿಗೇ ಹೋಗಿ ಅವರ ಬಳಿ ಹಲವು ಪಠ್ಯ ವಿಷಯಗಳ ಬಗೆಗೆ ಚರ್ಚಿಸಿ ಅವರಿಂದ ಪ್ರಯೋಜನ ಪಡೆಯುತ್ತಿದ್ದುದುಂಟು. ಆದರೆ ಎಂದೂ ಎಂ.ಸಿ.ಎ. ಬೇಸರಪಟ್ಟುಕೊಳ್ಳಲಿಲ್ಲ-ಬೇಸರವಾದವರಂತೆ ಕಾಣಿಸಿಕೊಳ್ಳಲೂ ಇಲ್ಲ. ನನ್ನ ಎರಡು ವರ್ಷಗಳಲ್ಲಿ ಅವರಿಂದ ಏನೆಲ್ಲಾ ವಿಷಯಗಳ ಬಗೆಗೆ ಕಲಿತೆನಾದರೂ ಅವರ ತಾಳ್ಮೆಯನ್ನು ರೂಢಿಸಿಕೊಳ್ಳಲು ಕಷ್ಟವೆನಿಸುತ್ತಿದೆ. ಅವರೇ ಒಮ್ಮೆ ಹೇಳಿದ್ದುಂಟು, "ಸಿಟ್ಟು ಬೇರೆ, ಕೋಪ ಬೇರೆ ನಮ್ಮ ಕನ್ನಡಿಗರಿಗೆ ಕೋಪ ಬರುತ್ತೇ ವಿನಃ ಸಿಟ್ಟಿಲ್ಲ". ಆದರೆ ನಾನು ಇದುವರೆಗೆ ಎಂ.ಸಿ.ಎಂ. ಕೋಪಿಸಿ ಕೊಂಡದ್ದನ್ನೂ ಕಂಡಿಲ್ಲ. ಅವರು ಕೋಪದಿಂದ ಮಾತನಾಡದಿದ್ದರೂ ಮನಸ್ಸಿಗೆ ತಟ್ಟುವಂತೆ ಮಾರ್ಮಿಕ ವಾಗಿ ನುಡಿಯಬಲ್ಲವರು. ಎಂದೂ ಯಾವ ವಿದ್ಯಾರ್ಥಿ ಯನ್ನು ಅವರು ಗದರಿಸಿದವರಲ್ಲ, ತರಗತಿಯಲ್ಲಿಯೇ ಆಗಲಿ, ಹೊರಗಾಗಲೀ ವಿದ್ಯಾರ್ಥಿಗಳನ್ನು ಅವರಷ್ಟು ವಾತ್ಸಲ್ಯದಿಂದ ಕಂಡ ಅಧ್ಯಾಪಕರನ್ನು ನಾನು ಕಂಡಿಲ್ಲ. ಎಷ್ಟೋ ಮಂದಿ ವಿದ್ಯಾರ್ಥಿಗಳು ಅವರ ಮನೆಯ ಬಳಿಯೇ ಹೋಗಿ ಪಾಠ ಹೇಳಿಸಿಕೊಂಡು ಬಂದಿದ್ದುಂಟು. 'ಜ್ಞಾನ ಭಾರತಿ' ಯಲ್ಲಾಗದಿದ್ದರೆ ಸೆಂಟ್ರಲ್ ಕಾಲೇಜು ಬಳಿ ಭಾನುವಾರದಂದೂ ಅವರು ವಿಶೇಷ ತರಗತಿ ತೆಗೆದು ಕೊಳ್ಳುತ್ತಿದ್ದರು. ಶಾಸನಶಾಸ್ತ್ರ ಮಾತ್ರವಲ್ಲದೆ ಭಾಷಾ ವಿಜ್ಞಾನದ ಬಗೆಗೂ ಅಗಾಧ ಪಾಂಡಿತ್ಯವುಳ್ಳ ಎಂ.ಸಿ.ಎಂ. ರವರ ಭಾಷಾ ವಿಜ್ಞಾನದ ತರಗತಿಗಳಿಗೂ ನಾವು ಕೆಲವರು ಹೋಗಿ ಕುಳಿತುಕೊಳ್ಳುತ್ತಿದ್ದುದುಂಟು. ಸರಳವಾಗಿಯೇ ವಿವರಿಸುತ್ತಾ ಗಹನವಾದ ವಿಷಯಗಳು ಮನಸ್ಸಿನಲ್ಲಿ ಬೇರೂರುವಂತೆ ಬೋಧಿಸುತ್ತಿದ್ದರು. ಯಾವುದೇ ಕಾವ್ಯವಾಗಲೀ, ಶಾಸ್ತ್ರವಾಗಲೀ ಉತ್ಸಾಹದಿಂದ ಬೋಧಿ ಸುತ್ತಿದ್ದ.ಎಂ.ಸಿ.ಎಂ. ಅನುಕರಣೀಯ ಅಧ್ಯಾಪಕರೇ ನಿಜ. ಅವರ ಶಿಸ್ತು ಇಂದಿನ ಪ್ರತಿಯೊಬ್ಬ ಅಧ್ಯಾಪಕನಿಗೂ ಅತ್ಯಗತ್ಯ. ಅವರಂತಹ ನಿಷ್ಪಕ್ಷಪಾತ ಮನೋಭಾವವನ್ನು ನಮ್ಮ ಅಧ್ಯಾಪಕರು ಅವರಿಂದ ಕಲಿಯಬೇಕು. ಇಂದಿನ ಹಲವು ವಿ.ವಿ. ಗಳು ಜಾತೀಯತೆಯ ಆಧಾರಗಳಾಗಿವೆ. ಕೆಲವು ಪ್ರಾಧ್ಯಾಪಕರು ತಮ್ಮ ಸ್ಥಾನವನ್ನೂ ಮರೆತು ಜಾತೀಯ ಮನೋಭಾವ, ಸ್ವಜನಪಕ್ಷಪಾತದೃಷ್ಟಿ ಬೆಳೆಸಿಕೊಂಡಿದ್ದಾರೆ. ಆದರೆ ಯಾವ ವ್ಯಕ್ತಿಯೂ ಎಂ.ಸಿ.ಎಂ. ರವರತ್ತ ಬೆರಳು ತೋರಿಸುವಂತಿಲ್ಲ. ಆದ್ದ ರಿಂದಲೇ ನಿಜವಾಗಿಯೂ ಎಂ.ಸಿ.ಎಂ. ಅಜಾತ ಶತ್ರು ಗಳಾಗಿರುವುದು.

ಕೇವಲ ಅಧ್ಯಾಪನದಲ್ಲಿ ತೊಡಗಿದಾಗ ಮಾತ್ರವಲ್ಲ ಬೇರೆಡೆಯಲ್ಲಿಯೂ ಎಂ.ಸಿ.ಎಂ. ವಿದ್ಯಾರ್ಥಿಗಳನ್ನು ಸೌಜನ್ಯದಿಂದ ನಡೆಸಿಕೊಳ್ಳುತ್ತಿದ್ದರು. ನಾನು ದ್ವಿತೀಯ ಎಂ. ಎ., ವಿದ್ಯಾರ್ಥಿಯಾಗಿದ್ದಾಗ ಅವರೊಡನೆ ಕೈಗೊಂಡ ಹಂಪೆಯ ಪ್ರವಾಸ ಈ ಜನ್ಮದಲ್ಲಿ ಮರೆಯಲಾಗದ ಅನುಭವ ಕೊಟ್ಟಿದೆ. ಸುಮಾರು ಹತ್ತು-ಹನ್ನೆರಡು ಮಂದಿ ವಿದ್ಯಾರ್ಥಿಗಳ ಜೊತೆಗೆ ಹಂಪೆಗೆ ತಾವೇ ಬಂದು ಅಲ್ಲಿಯ ವಿವಿಧ ಪ್ರಾಚೀನ ಸಾಂಸ್ಕೃತಿಕ ಮಹತ್ವದ ಸ್ಥಳಗಳ ಬಗೆಗೆ ವಿವರಿಸುತ್ತಾ, ಪ್ರತಿಯೊಬ್ಬನಿಗೂ ಕನ್ನಡ ನಾಡಿನ ಭವ್ಯಪರಂಪರೆಯ ಬಗೆಗೆ ಅಭಿಮಾನ ಮೂಡಿಸುವಂಥ ಮಾತುಗಳಾಡಿದ್ದರು. ಹಂಪೆಯಲ್ಲಿ ಅವರೊಡನೆ ಕಳೆದ ಒಂದುವಾರದ ಆ ಸಮಯ ನಮಗೆ ಚಿರಸ್ಮರಣೀಯ. ಅಲ್ಲಿನ ಹಲವು ಮಹತ್ವದ ಸ್ಥಳಗಳ ಬಗೆಗೆ ಹೇಳುತ್ತಲೇ ತಮ ವಿದ್ಯಾರ್ಥಿಗಳಲ್ಲಿ ಸಂಶೋಧನಾಸಕ್ತಿಯನ್ನು ಮೂಡಿಸು ತ್ತಿದ್ದರು. ಅವರೊಂದಿಗೆ ಕಳೆದ ಅಲ್ಲಿನ ಉಪಯುಕ್ತ ದಿನಗಳ ಬಗೆಗೆ ಅಡಕವಾಗಿ ಇಲ್ಲಿ ಹೇಳುವುದು ಅಸಾಧ್ಯ. ಹಂಪೆಯ ಪ್ರವಾಸಕ್ಕೆ ನಾವು ಹೋಗುವ ಮುನ್ನ ನಮ್ಮೊಡನೆ ಎಂ.ಸಿ.ಎಂ.ಬರುತ್ತಾರೆಂದು ತಿಳಿದಾಗ ನಮಗಾಗಿದ್ದ ಸಂತೋಷ ಅಷ್ಟಿಷ್ಟಲ್ಲ. ಹಂಪೆಗೆ ಬಂದು ಅಲ್ಲಿ ನಮ್ಮೊಡನೇ ತಂಗಿದ್ದು ಅಧ್ಯಾಪನ ಬೇರೆ ಬೇರೆ ರೀತಿ ಯಲ್ಲಿ ಅವರಲ್ಲಿಯೂ ಐತಿಹಾಸಿಕ ಸ್ಥಳಗಳ ಪ್ರವಾಸದಿಂದ

ಹೇಗೆ ಪರಿಣಾಮಕಾರಿಯಾಗಬಲ್ಲದು ಎಂಬುದನ್ನು ತಮ್ಮ ವಿದ್ವತ್ಪೂರ್ಣ ಮಾತುಗಳ ಮೂಲಕವೇ ತಿಳಿಸಿಹೇಳಿದ್ದು ನೆನಪಿದೆ.

ಹರಿಹರ, ಚಾಮರಸ ಮೊದಲಾದ ಕವಿಗಳು ನೆಲೆಸಿದ ಸ್ಥಾನದ ಬಗೆಗೆ ವಿವರಿಸುವಾಗಲಂತೂ ಎಂ.ಸಿ.ಎಂ. ಭಾವುಕರಾದವರಂತೆ ಕಾಣುತ್ತಿದ್ದರು. ಹಂಪೆಯ ಚಾಮರಸನ ಗುಹೆಯನ್ನು ಸಂಶೋಧಿಸಿದ ಕೀರ್ತಿಯೂ ಎಂ.ಸಿ.ಎಂ. ರವರಿಗೇ ಸಲ್ಲುತ್ತದೆಯಷ್ಟೆ. ನಮ್ಮನ್ನು ಆ ಸ್ಥಳಕ್ಕೆ ಕರೆದೊಯ್ದು ತುಂಬಾ ವಿವರವಾಗಿ ಹೆಚ್ಚು ವಿಷಯಗಳನ್ನು ತಿಳಿಸಿ ನಮಗೆ ಇತ್ತೀಚೆಗೆ ಅದನ್ನು ಪತ್ತೆಹಚ್ಚಿದ ಬಗ್ಗೆ ಹೇಳಿದ್ದರು. ಒಟ್ಟಿನಲ್ಲಿ ಎಂ.ಸಿ.ಎಂ. ವಿದ್ಯಾರ್ಥಿಗಳನ್ನು ಅತ್ಯಂತ ವಾತ್ಸಲ್ಯದಿಂದ ನೋಡಿಕೊಳ್ಳುವ ಅಧ್ಯಾಪಕರು. ವಿದ್ಯಾರ್ಥಿಗಳು ಯಾವುದೇ ಪುಸ್ತಕ ಕೇಳಿದರೂ ಹಿಂದೆ-ಮುಂದೆ ನೋಡದೆ ಕೊಡುತ್ತಿದ್ದ ಎಂ.ಸಿ.ಎಂ. ವಿದ್ಯಾರ್ಥಿಗಳಲ್ಲಿ ಓದುವ ಆಸಕ್ತಿಯನ್ನು ಹೆಚ್ಚಿಸಿದ್ದರು. ಹೆಚ್ಚು ಓದಿ ಕೊಳ್ಳದೆ ಅವರ ಬಳಿ ಯಾವುದೇ ವಿಷಯವನ್ನು ಚರ್ಚಿಸಲು ಸಾಧ್ಯವಿಲ್ಲ. ಎಂ.ಸಿ.ಎಂ. ಬಹುಬೇಗ ಬೇರೆಯವರ ಅಂತರಂಗವನ್ನು ಅರಿಯಬಲ್ಲವರು. ಅವರ ಪ್ರಾಮಾಣಿಕತೆ, ಸತ್ಯನಿಷ್ಠುರತೆ, ಭಾವಶುದ್ಧತೆಗಳಿಂದ ಕೂಡಿದ ಕನ್ನಡ ಸೇವೆ ಅವರೊಬ್ಬರು ಆದರ್ಶ ಕನ್ನಡ ಪ್ರೇಮಿ ಎಂಬುದನ್ನು ಸಾರಿ ಹೇಳುತ್ತಿರುವಂತೆಯೇ ಅವರ ಸತ್ವ-ತತ್ವಗಳೆರಡರಿಂದಲೂ ಕೂಡಿದ ಅಧ್ಯಾಪನ ಎಂ.ಸಿ.ಎಂ. 'ಆದರ್ಶ ಅಧ್ಯಾಪಕ' ರೆಂಬುದನ್ನು ಸಾರುತ್ತಿದೆ.

---

ಸಾಮಾನ್ಯವಾಗಿ ಪ್ರತಿಯೊಬ್ಬರಿಗೂ ತಮ್ಮ ತಮ್ಮ ಭಾಷೆಯ ವಿಷಯದಲ್ಲಿ ಹೆಮ್ಮೆ ಭಕ್ತಿ ಶ್ರದ್ಧೆಗಳು ಇದ್ದೇ ಇರುತ್ತವೆ. ಹೀಗಿರುವುದೇನೂ ತಪ್ಪಾಗಿ ಕಾಣುವುದಿಲ್ಲ. ಆದ್ದರಿಂದ, ಕನ್ನಡದ ಪರವಾಗಿ, ಕನ್ನಡದ ಮೇಲಿನ ಅಭಿಮಾನದಿಂದ, ನಾನು ಒಂದು ಮಾತನ್ನು ಹೇಳಿದ ಪಕ್ಷದಲ್ಲಿ ಅದನ್ನು ಸಂಕುಚಿತ ದೃಷ್ಟಿಯೆಂದು ಹೇಳಬಾರದು ; ಆ ಮಾತೇನೆಂದರೆ – "ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ". ಸಂಸ್ಕೃತವಲ್ಲ, ಇಂಗ್ಲೀಷಲ್ಲ, ಹಿಂದಿಯಲ್ಲ, ಕನ್ನಡ. ಈ ಕನ್ನಡ ಸಾವಿರಾರು ವರ್ಷಗಳಿಂದಲೂ ಬೆಳೆದುಬಂದಿರುವ ಭಾಷೆ, ಒಂದು ಸಾಹಿತ್ಯದ ವಿಷಯದಲ್ಲಿಯೇ ಆಗಲಿ, ಚರಿತ್ರೆಯ ವಿಷಯದಲ್ಲಿಯೇ ಆಗಲಿ, ಅಥವಾ ಸಂಸ್ಕೃತಿ ಧರ್ಮಕಲೆ ಮುಂತಾದ ಮತ್ತಾವ ವಿಷಯದಲ್ಲೇ ಆಗಲಿ, ಇತರ ಭಾಷೆಗಳವರು ಎಷ್ಟು ಅಭಿಮಾನ ಆಸಕ್ತಿಗಳನ್ನು ತೋರಿಸಬಹುದೋ ಅಷ್ಟೇ ಅಭಿಮಾನವನ್ನೂ ಕನ್ನಡಿಗರು ಕನ್ನಡ ಭಾಷೆಯ ವಿಷಯದಲ್ಲಿ ತೋರಿಸುವುದಕ್ಕೆ ಅವಕಾಶವಿದೆಯೆಂದು ನಾನು ನಂಬಿದ್ದೇನೆ.

— ಬಿ. ಎಂ. ಶ್ರೀ.

## ಮುಂದುವರಿದ ಸ್ವಾಗತ ಸಮಿತಿಯ ಸದಸ್ಯರು

106. ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮೀಜಿ ಕುಪ್ಪೂರು ಗದ್ದಿಗೆ ಮಠ
107. ಶ್ರೀ ಶಿವರುದ್ರ ಸ್ವಾಮಿಗಳು, ಕಂಚಕಲ್ ಬಂಡೆಮಠ
108. ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಹಿರೇಮಠ
109. ಎಚ್. ಶಿವಲಿಂಗಯ್ಯ, ಬೆಂಗಳೂರು
110. ಎಂ. ವಿ. ಮೃತ್ಯುಂಜಯ
111. ಜಗದ್ಗುರು ತೋಂಟದಾರ್ಯ ಸಂಸ್ಥಾನ, ಗದಗ
112. ಎ. ಎಂ. ಬಸವೇಗೌಡ, ಚಿಕ್ಕಮಗಳೂರು
113. ಶ್ರೀ ಬಸವಲಿಂಗಹಾಲು ಸ್ವಾಮೀಜಿ, ತರಿಕೆರೆ
114. ಶ್ರೀ ಶಿವಾನಂದ ಸ್ವಾಮೀಜಿ, ಅಜ್ಜಂಪುರ
115. ಪಾರ್ವತಮ್ಮ, ಬೆಂಗಳೂರು
116. ಟಿ. ಜಿ. ಗುರುಪ್ರಕಾಶ್, ಬೆಂಗಳೂರು
117. ಮಂಜುಳಾರಾವ್, ಬೆಂಗಳೂರು
118. ಡಾ॥ ಪಾಲಾಕ್ಷಯ್ಯ, ತುಮಕೂರು
119. ಮಂಜುನಾಥ, ತುಮಕೂರು
120. ಕೊಟ್ಟೂರಪ್ಪ, ತುಮಕೂರು
121. ಶ್ಯಾಮಸುಂದರ ಕೋಜಿ, ತುಮಕೂರು
122. ಸೋ. ಮು. ಭಾಸ್ಕರಾಚಾರ್ಯ, ತುಮಕೂರು
123. ಎನ್. ಶಿವರುದ್ರಯ್ಯ, ತುಮಕೂರು
124. ಎಸ್. ಅನುಸೂಯಮ್ಮ, ತುಮಕೂರು
125. ಎಚ್. ಎಸ್. ಚಂದ್ರಶೇಖರ, ತುಮಕೂರು
126. ಎಸ್. ಸುಮಂಗಲ, ತುಮಕೂರು
127. ಪ್ರೊ॥ ಎಸ್. ಜಿ. ಸಣ್ಣಗುಡ್ಡಯ್ಯ, ತುಮಕೂರು
128. ಬಿ. ಎಸ್. ಮಂಜುಳಾ, ತುಮಕೂರು
129. ಎಚ್. ವಿ. ವೀರಭದ್ರಪ್ಪ, ತುಮಕೂರು
130. ಜಯತಿರುಮಲ್ಲೇಶಪ್ಪ, ಬೆಂಗಳೂರು
131. ಕೆ. ಆರ್. ಗಣೇಶ, ಬೆಂಗಳೂರು
132. ಮುಳಕುಂಟೆ ಎನ್. ಪ್ರಕಾಶ್, ಬೆಂಗಳೂರು
133. ಡಾ॥ ನಂಜುಂಡಸ್ವಾಮಿ, ತುಮಕೂರು
134. ಕೊ. ಸ. ಅಪರ್ಣ, ಬೆಂಗಳೂರು
135. ಪಿ. ವಿ. ಕೃಷ್ಣಮೂರ್ತಿ, ಬೆಂಗಳೂರು
136. ಎಸ್. ನರಸಿಂಹಸ್ವಾಮಿ, ಬೆಂಗಳೂರು
137. ಜಿ. ಸುಭಾಷ್ ಚಂದ್ರಬೋಸ್, ಬೆಂಗಳೂರು
138. ಕೆ. ತಿಮ್ಮೇಗೌಡ, ಬೇಗಳೂರು
139. ಜಿ. ಬಿ. ರೇವಣಾರಾಧ್ಯ, ಬೆಂಗಳೂರು
140. ಸ್ವಾಮಿ ಟಿ. ಆಂತೋಣಿಸ್ವಾಮಿ, ಬೆಂಗಳೂರು
141. ಸ್ವಾಮಿ ಅಮೃತರಾಜ್, ಚನ್ನಪಟ್ಟಣ
142. ಸ್ವಾಮಿ ಚೌರಿಮುತ್ತು, ಮರಿಯನ್ನಪಾಳ್ಯ
143. ಸ್ವಾಮಿ ಚಸರ್, ಕನಕಪುರ
144. ಸ್ವಾಮಿ ಸಿ. ಫ್ರಾನ್ಸಿಸ್, ಕಾರಹಳ್ಳಿ
145. ಸ್ವಾಮಿ ಐ. ಜೋಸೆಫ್, ಚಿಕ್ಕಬಳ್ಳಾಪುರ
146. ಸ್ವಾಮಿ ಫಾತಿರಾಜ್, ಸೊಸೆಪಾಳ್ಯ
147. ಸ್ವಾಮಿ ಚಿನ್ನಪ್ಪ, ಬೆಂಗಳೂರು
148. ಪ. ರ. ಫಾಯಲ್, ಬೆಂಗಳೂರು
149. ಮರಿಜೋಸೆಫ್, ಬೆಂಗಳೂರು
150. ಕರ್ನಾಟಕ ಕಥೋಲಿಕ್ ಕ್ರೈಸ್ತರ ಕನ್ನಡ ಸಂಘ
151. ಶ್ರೀಕಂಠಯ್ಯ
152. ಎನ್. ಎ. ಎಲ್. ನೌಕರರ ಸಂಘ
153. ಎನ್. ಎ. ಎಲ್. ನೌಕರರ ಸಹಕಾರ ಸಂಘ ಬೆಂಗಳೂರು
154. ಎನ್. ಎ. ಎಲ್. ಕನ್ನಡ ಸಾಂಸ್ಕೃತಿಕ ಸಂಘ ಬೆಂಗಳೂರು
155. ಪಿ. ಸತೀಶ ಪೈ
156. ಬಿ. ಎ. ಶ್ರೀಧರ್
157. ಬೆಟ್ಟಸ್ವಾಮಿ ಗೌಡ
158. ರಾಜಣ್ಣ

159. ರಾಜೇಗೌಡ
160. ವಿಶುಕುಮಾರ್
161. ವೆಂಕಟರಾಮಯ್ಯ
162. ಪದ್ಮನಾಭಯ್ಯ
163. ಕೆ. ಆರ್. ರುದ್ರಾರಾಧ್ಯ
164. ಪ್ರೊ॥ ಬಿ. ಕೆ. ಚಂದ್ರಶೇಖರ
165. ಎನ್. ಜಯಲಕ್ಷ್ಮಿ (ದಿ॥ ತೀ.ನಂ.ಶ್ರೀ. ಅವರ ಪತ್ನಿ)
166. ಎಂ. ಮಂಜುಳ
167. ಪು. ತಿ. ತಿರುನಾರಾಯಣ
168. ಜಯಲಕ್ಷ್ಮಿ ಗೋಪಿನಾಥರಾವ್
169. ಗೀತಾ ಆನಂದ
170. ಎ. ಎನ್. ಪ್ರಭಾಕರ್
171. ಎಚ್. ಆರ್. ಸೂರ್ಯನಾರಾಯಣ
172. ಡಾ॥ ಎ. ವಿ. ಷಣ್ಮುಗಂ
173. ನಾಗರತ್ನ ಚಂದ್ರಶೇಖರಯ್ಯ
174. ಹೃದಯರಾಜ್, ಬೆಂಗಳೂರು



ಡಾ|| ಎಂ. ಚಿದಾನಂದಮೂರ್ತಿ ಷಷ್ಟ್ಯಬ್ದಿ ಸಮಾರಂಭಕ್ಕೆ ಶುಭಾಶೀರ್ವಾದಗಳು




ದೂರವಾಣಿ : ೭೪೯

# ಶ್ರೀ ಶ್ರೀ ಶ್ರೀ ಜಯಚಂದ್ರಶೇಖರ ಸ್ವಾಮೀಜಿ

ಬಸವ ಮಂದಿರ, ಜಬಲಪುರಿ ಮಠ, ಜ್ಯೋತಿನಗರ ಅಂಚೆ

ಚಿಕ್ಕಮಗಳೂರು - ೫೭೭೧೦೨

# ಸೌಂದರ್ಯ ಮತ್ತು ಸಂಪದ್ಭರಿತವಾದ ಕರ್ನಾಟಕಕ್ಕಾಗಿ...





ರ್ನಾಟಕ ಮರ ನೆಡುವ ಬೃಹತ್ ಕಾರ್ಯಕ್ರಮ ಒಂದನ್ನು ಕಾರ್ಯಗತಗೊಳಿಸಿದೆ. ಗ್ರಾಮೀಣ ಉದ್ಯೋಗ ಸೃಷ್ಟಿ ಮತ್ತು ಗ್ರಾಮೀಣ ಜನತೆಗೆ ಇಂಧನ. ಮೇವು ಮತ್ತು ಸಣ್ಣ ಪುಟ್ಟ ಮರ ಮುಟ್ಟುಗಳ ದಿನ ನಿತ್ಯದ ಅವಶ್ಯಕತೆ ನೀಗಲು ಈ ಯೋಜನೆಯಲ್ಲಿ ವಿಶೇಷ ಗಮನ ಹರಿಸಿದೆ. ಇವೆಲ್ಲಕ್ಕಿಂತ ಮಿಗಿಲಾಗಿ. ಸದರಿ ಸಾಮಾಜಿಕ ಅರಣ್ಯ ಯೋಜನೆ ನಮ್ಮ ಜೀವಿತದ ಒಂದು ಪರಿಪೂರ್ಣ ಅಂಗವಾಗಿದೆ. ಹಾಗೂ ಮಾನವ ಮತ್ತು ಅರಣ್ಯಗಳ ನಡುವೆ ಇದ್ದ ಪೂರ್ವಿಕ ಹಾಗೂ ಸಾಂಪ್ರದಾಯಿಕ ವಿಶ್ವಾಸವನ್ನು ಪುನಶ್ಚೇತನಗೊಳಿಸುವುದು. ಕರ್ನಾಟಕದ ಮತ್ತು ರಾಷ್ಟ್ರದ ಮಹತ್ತ ಪೂರ್ಣ ಅಭ್ಯುದಯಕ್ಕೆ ಹಾದಿಯಾದ ಈ ಕಾರ್ಯಕ್ರಮದ ಯಶಸ್ಸಿಗೆ ನಾವೆಲ್ಲ ಶ್ರಮಿಸೋಣ!

ಉಚಿತ ಆರೋಗ್ಯಕರವಾದ ಸಸಿ ಮತ್ತು
ಸಲಹೆಗಾಗಿ ಸಮೀಪದ
ಅರಣ್ಯಾಧಿಕಾರಿಯನ್ನು ಸಂಪರ್ಕಿಸಿ




**ಕರ್ನಾಟಕ ಅರಣ್ಯ ಇಲಾಖೆ**
ಸಾಮಾಜಿಕ ಅರಣ್ಯ ಯೋಜನೆ
ಅರಣ್ಯ ಭವನ, ಬೆಂಗಳೂರು-೫೬೦ ೦೦೩

4AA/FD/8623

**ಅಭಿನಂದನ ಸಮಾರಂಭಕ್ಕೆ ಶುಭಾಶಯಗಳು**

**ಶ್ರೀ ಜಿ. ತೋಟದಪ್ಪ**
ಸೀಗೇಕಾಯಿ, ದಿನಸಿ ವ್ಯಾಪಾರಿಗಳು
ಮತ್ತು ಕಮಿಷನ್ ಏಜೆಂಟರು

●

೧೦/ಎ, ಆರ್. ಎಂ. ಸಿ. ಯಾರ್ಡ್
ಯಶವಂತಪುರ, ಬೆಂಗಳೂರು–೫೬೦ ೦೨೨

---

**ಶುಭಾಶಯಗಳೊಡನೆ**

**ಶ್ರೀಮತಿ/ಶ್ರೀ ಎಂ. ಪಿ. ಷಡಾಕ್ಷರಯ್ಯ**

# ಶ್ರೀ ಗುರುಮರುಳಸಿದ್ಧೇಶ್ವರ ಟ್ರೇಡರ್ಸ್

ಅಡಕೆ ವ್ಯಾಪಾರಿಗಳು

○

ಬೀರೂರು–೫೭೭ ೧೧೬
(ಚಿಕ್ಕಮಗಳೂರು ಜಿಲ್ಲೆ, ಕರ್ನಾಟಕ ರಾಜ್ಯ)

ದೂರವಾಣಿ : ೪೯೫೩

ಕನ್ನಡ ಜಾಗೃತಿಯ 'ಕ್ರಿಯಾಚೇತನ' ಡಾ॥ ಎಂ. ಚಿದಾನಂದಮೂರ್ತಿಯವರ
ಸನ್ಮಾನ ಸಮಾರಂಭಕ್ಕೆ ಯಶಸ್ಸು ಕೋರುವ,

ದೂರವಾಣಿ : 3361

ಪಾಲುದಾರರು : **ಹಾರನಹಳ್ಳಿ ಕೆ. ಮಂಜಪ್ಪ ಮತ್ತು ಮಕ್ಕಳು**
**ಕೆ. ವಾಸುದೇವಾಚಾರ್ ಮತ್ತು ಮಕ್ಕಳು**
ಚಿನ್ನ, ಬೆಳ್ಳಿ ಆಭರಣಗಳ ತಯಾರಕರು ಮತ್ತು ವ್ಯಾಪಾರಿಗಳು
**ಗಾಂಧಿ ಬಜಾರ್, ಶಿವಮೊಗ್ಗ-577 202**

ನಿವಾಸ :
**ಗೌರಿಕೃಪ, 1ನೇ ಅಡ್ಡರಸ್ತೆ, ಉದ್ಯಾನ ಬಡಾವಣೆ**
**ದುರ್ಗಿಗುಡಿ, ಶಿವಮೊಗ್ಗ-577 201**

---

ಕನ್ನಡದ ಕ್ರಿಯಾ ಶಕ್ತಿ ಡಾ॥ ಎಂ. ಚಿದಾನಂದಮೂರ್ತಿ ಅವರ
ಅಭಿನಂದನ ಸಮಾರಂಭಕ್ಕೆ ಯಶಸ್ಸು ಬಯಸುವ



**ಆರ್. ಶಿವಣ್ಣ**

**ಕೆ. ಚಿಕ್ಕೇಗೌಡ**

**ಕೆ. ಎನ್. ಶೇಷಾದ್ರಿ ಶಾಸ್ತ್ರಿ**

**ಎ. ಎಸ್. ವೆಂಕಟೇಶ್**

**ಎನ್. ಶ್ರೀನಿವಾಸಲು**

ಯಾವುದೇ ಮಗುವೂ ಪರಿಪೂರ್ಣ ಪಾಲನೆಯಿಂದ ವಂಚಿತವಾಗಬಾರದು,
ಆದ ಕಾರಣ, ಈ ಸಮಗ್ರ ಬಾಲವಿಕಾಸ ಯೋಜನೆ :-

ಪೌಷ್ಟಿಕ ಆಹಾರ, ಔಷಧೋಪಚಾರ ಹಾಗೂ ಸಾಕ್ಷರತೆ, ಪ್ರತಿ ಮಗುವಿನ ಆಜನ್ಮ ಹಕ್ಕು. ಈ ಪುಟಾಣಿ ಪ್ರಜೆಗಳ ಸರ್ವತೋಮುಖ ಅಭಿವೃದ್ಧಿಗೆಂದು ರಾಜ್ಯ ಸರ್ಕಾರ 6 ವರ್ಷದೊಳಗಿನ ಮಕ್ಕಳಿಗಾಗಿ ಒಂದು ಸಮಗ್ರ ಕಲ್ಯಾಣ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಈ ಕಾರ್ಯಕ್ರಮದಲ್ಲಿ ಲಭಿಸುವ ಸೇವೆಗಳೆಂದರೆ :-

**ರೋಗನಿರೋಧಕಗಳು :** ಟ್ರಿಪಲ್ ಆಂಟಿಜೆನ್, ಬಿಸಿಜಿ, ಪೋಲಿಯೋ ನಿರೋಧಕ ಚುಚ್ಚುಮದ್ದು ಹಾಗೂ ಇನ್ನಿತರ ರೋಗ ನಿರೋಧಕಗಳನ್ನು ನೀಡುವುದು.

**ಆರೋಗ್ಯ :** ಪ್ರಾಥಮಿಕ ಆರೋಗ್ಯ ಕೇಂದ್ರಗಳ ವೈದ್ಯರ ಮೂಲಕ ವೈದ್ಯಕೀಯ ಸೇವೆ ಹಾಗೂ ಮಾರ್ಗದರ್ಶನ.

**ಆಹಾರ :** ಅಂಗನವಾಡಿ ಕೇಂದ್ರಗಳ ಮೂಲಕ ಪುಷ್ಟಿದಾಯಕ ಹಾಗೂ ಸಮತೋಲನ ಆಹಾರ ನೀಡುವಿಕೆ.

**ವಿದ್ಯಾಭ್ಯಾಸ :** ಅಂಗನವಾಡಿಗಳಲ್ಲಿ 6 ವರ್ಷದ ಒಳಗಿನ ಮಕ್ಕಳಿಗೆ ಅನೌಪಚಾರಿಕ ವಿದ್ಯಾಭ್ಯಾಸ.

**ಗರ್ಭಿಣಿಯರು ಹಾಗೂ ಬಾಣಂತಿಯರು :** ಶಿಶುಗಳ ಪಾಲನೆ ಪೋಷಣೆ ಬಗ್ಗೆ ಗರ್ಭಿಣಿಯರು ಹಾಗೂ ಬಾಣಂತಿಯರಿಗೆ ಸೂಕ್ತ ತಿಳುವಳಿಕೆ ನೀಡಿ, ಮಕ್ಕಳ ಯೋಗ್ಯ ಪಾಲನೆ, ಆಹಾರ ಕ್ರಮ ಹಾಗೂ ಸಾಮಾನ್ಯ ಆರೋಗ್ಯ ರಕ್ಷಣೆ ಬಗ್ಗೆ ಮಾರ್ಗದರ್ಶನ.

**ನಿರ್ದೇಶನ ಸೇವೆಗಳು :** ಶಿಶುಗಳ, ಮಾತೆಯರ ಆರೋಗ್ಯ ಸಂಬಂಧವಾದ ಗಂಭೀರ ಪರಿಸ್ಥಿತಿಗಳಲ್ಲಿ ಅವರನ್ನು ಆಸ್ಪತ್ರೆಗಳು ಹಾಗೂ ಇತರ ತಜ್ಞರ ಸಂಸ್ಥೆಗಳಿಗೆ ಸೇರಿಸಿ ಯೋಗ್ಯ ಚಿಕಿತ್ಸೆ ದೊರಕುವಂತೆ ಮಾಡುವುದು.

ಸೂಕ್ತ ತರಬೇತಿ ಪಡೆದ ಅಂಗನವಾಡಿ ಕಾರ್ಯಕರ್ತರುಗಳು ಮತ್ತು ಸಹಾಯಕರಿಂದ ಅಂಗನವಾಡಿ ಕೇಂದ್ರಗಳಲ್ಲಿ ಈ ಯೋಜನೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. ಬಾಲವಿಕಾಸ ಯೋಜನಾಧಿಕಾರಿಗಳು ಈ ಕೇಂದ್ರಗಳ ಕಾರ್ಯಕ್ಷಮತೆರು ಮೇಲ್ವಿಚಾರಣೆ ನಡೆಸುವರು.

ಪೂರ್ಣ ವಿವರ ಮತ್ತು ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ :

**ಈ ಯೋಜನೆಯನ್ನು ಕಾರ್ಯಗತ ಗೊಳಿಸುತ್ತಿರುವ ಬ್ಲಾಕ್‌ನ ಬಾಲ ವಿಕಾಸ ಯೋಜನಾಕಾರಿಗಳು ಅಥವಾ ಬ್ಲಾಕ್ ಡೆವಲಪ್‌ಮೆಂಟ್ ಆಫೀಸರ್‌ಗಳು**

## ಅಸಹಾಯಕರಿಗೊಂದು ಸಹಾಯದ ಯೋಜನೆ

**–ಕರ್ನಾಟಕ ವಾರ್ತೆ**

ಶುಭಾಶಯಗಳೊಂದಿಗೆ,

# ಶ್ರೀ ಈಶ್ವರ ಸೇವಾ ಮಂಡಲಿ (ರಿ.)

ಸಂಪಿಗೆ ರಸ್ತೆ, ಮಲ್ಲೇಶ್ವರ, ಬೆಂಗಳೂರು-560 003



-: ಕಾರ್ಯಕಾರಿ ಮಂಡಲಿ :-

| | |
|---|---|
| ಅಧ್ಯಕ್ಷರು : | ಶ್ರೀ ಬಿ. ಎಸ್. ಶಿವಪ್ಪ ಶೆಟ್ಟರು |
| ಉಪಾಧ್ಯಕ್ಷರು : | ಶ್ರೀಮತಿ ಸೌಭಾಗ್ಯ ಈಶ್ವರಯ್ಯ |
| ಕಾರ್ಯದರ್ಶಿ : | ಶ್ರೀ ಎಸ್. ಬಸವರಾಜ್ |
| ಸಹ ಕಾರ್ಯದರ್ಶಿ : | ಶ್ರೀ ಬಿ. ಎಸ್. ಶಿವಣ್ಣ |
| ಖಜಾಂಚಿ : | ಶ್ರೀ ಸಿ. ಕೆ. ಬಸವರಾಜ್ |
| ಆಂತರಿಕ ಲೆಕ್ಕಪರಿಶೋಧಕರು : | ಶ್ರೀ ಕೆ. ಎಂ. ಶಿವಯೋಗಿ ಸ್ವಾಮಿ |
| ಸದಸ್ಯರು : | ಶ್ರೀ ಎಚ್. ಕೆ. ಪ್ರಸನ್ನಕುಮಾರ್ |
| | ಶ್ರೀ ಎಚ್. ಎಂ. ವೀರಭದ್ರಯ್ಯ |
| | ಶ್ರೀ ಎನ್. ಗಂಗಾಧರಪ್ಪ |
| | ಶ್ರೀ ಎನ್. ಆರ್. ಪಂಡಿತಾರಾಧ್ಯ |
| | ಶ್ರೀ ಆರ್. ಬಿ. ಎಸ್. ಚನ್ನಬಸವಾರಾಧ್ಯ |
| | ಶ್ರೀ ಎಸ್. ಆರ್. ಸಿದ್ಧರಾಜು |

ಡಾ|| ಎಂ. ಚಿದಾನಂದಮೂರ್ತಿಯವರ

ಅಭಿನಂದನ ಸಮಾರಂಭಕ್ಕೆ

ಶುಭಾಶಯಗಳು :



ಭೂಪಾಳಂ ಆರ್. ನಂಜುಂಡಯ್ಯ

ಮತ್ತು

ಮಕ್ಕಳು

ಶಿವಮೊಗ್ಗ

ಡಾ|| ಎಂ. ಚಿದಾನಂದಮೂರ್ತಿಯವರ
ಅಭಿನಂದನ ಸಮಾರಂಭಕ್ಕೆ
ಶುಭ ಹಾರೈಕೆಗಳು

# ಶ್ರೀ ಕೆ. ಸಿದ್ಧಲಿಂಗಯ್ಯ ಮತ್ತು ಮಕ್ಕಳು

ಕಾಫಿ ಬೆಳೆಗಾರರು ಮತ್ತು ವರ್ತಕರು

○

ಅನ್ನಪೂರ್ಣ ಎಸ್ಟೇಟ್, ಆಲ್ದೂರು
ಚಿಕ್ಕಮಗಳೂರು – ಜಿಲ್ಲೆ

---

ಕನ್ನಡ ಶಕ್ತಿ ಡಾ|| ಎಂ. ಚಿದಾನಂದಮೂರ್ತಿಯವರ ಅಭಿನಂದನ
ಸಮಾರಂಭಕ್ಕೆ ಶುಭಾಶಯಗಳು

**ಕನ್ನಡ ಕ್ರೈಸ್ತರ ಸಂಘ**
ಹೊಸ ಗುಡ್ಡದ ಹಳ್ಳಿ
ಬೆಂಗಳೂರು–560 026

ಮತ್ತು

**ಕನ್ನಡ ಕಥೋಲಿಕರ ಸಂಘ**
೧೯, ಒನೆಯ 'ಏ' ಅಡ್ಡರಸ್ತೆ
ಸುಭೇದಾರ್‌ಪಾಳ್ಯ, ಯಶವಂತಪುರ
ಬೆಂಗಳೂರು–560 022

ಡಾ|| ಎಂ. ಚಿದಾನಂದಮೂರ್ತಿಯವರ

ಅಭಿನಂದನ ಸಮಾರಂಭಕ್ಕೆ

ಹಾರ್ದಿಕ ಶುಭಾಶಯಗಳು



ಜಯರಾಮ್

ಮತ್ತು

ವಿದ್ಯಾ ಜೆ. ಶೆಟ್ಟಿ

ಕನ್ನಡ ಕ್ರಿಯಾಶಕ್ತಿ
ಡಾ|| ಎಂ. ಚಿದಾನಂದಮೂರ್ತಿಯವರ
ಅಭಿನಂದನ ಸಮಾರಂಭಕ್ಕೆ
ಹಾರ್ದಿಕ ಶುಭಾಶಯಗಳು

ಕರ್ನಾಟಕ
ಕಥೋಲಿಕ
ಕ್ರೈಸ್ತರ
ಕನ್ನಡ
ಸಂಘ



ಬೆಂಗಳೂರು

ಡಾ॥ ಎಂ. ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭಕ್ಕೆ
ಆತ್ಮೀಯ ಅಭಿನಂದನೆಗಳು

# ಶ್ರೀ ಜಿ. ಎಸ್. ಉದ್ದೇಗೌಡ ಮತ್ತು ಮಕ್ಕಳು

ಕಾಫಿ ಬೆಳೆಗಾರರು ಮತ್ತು ಮಂಡಲ ಪ್ರಧಾನರು

## ಗಂಗೆಬಾವಿ ಎಸ್ಟೇಟ್, ಆಲ್ದೂರು, ಚಿಕ್ಕಮಗಳೂರು ಜಿಲ್ಲೆ



ಶುಭಾಶಯಗಳು :

**ಶ್ರೀ ಶಘು, ರವಿ, ಸರೋಜ**

## ಹಾರ್ದಿಕ ಶುಭಾಶಯಗಳು

# ದಿ ಎನ್. ಎಸ್. ಎಸ್. ಎಸ್. ಕಲ್ಯಾಣ ಕೇಂದ್ರ, ಬೆಂಗಳೂರು

ನಂ. 293, 39ನೇ ಅಡ್ಡ ರಸ್ತೆ, 8ನೇ ಬ್ಲಾಕ್, ಜಯನಗರ, ಬೆಂಗಳೂರು-560 082

ಕಿತ್ತೂರು ರಾಣಿ ಚನ್ನಮ್ಮನ ನಾಡಿನಲ್ಲಿಯ ನಾಗನೂರ ಗ್ರಾಮದಲ್ಲಿಯ ರುದ್ರಾಕ್ಷಿ ಮಠಾಧ್ಯಕ್ಷರಾದ ಶ್ರೀ ಮ. ನಿ. ಪ್ರ. ಡಾ. ಶ್ರೀ ಶಿವಬಸವ ಸ್ವಾಮಿಗಳು ಗುರು ವೀರಭದ್ರ ಸ್ವಾಮಿಗಳು ರುದ್ರಾಕ್ಷಿಮಠ ಇವರು ಸರ್ವಸಮಾಜದ ಏಳಿಗೆಗಾಗಿ ತಮ್ಮನ್ನು ಅರ್ಪಿಸಿಕೊಂಡು ತಮ್ಮ ಜನಹಿತ ಕಾರ್ಯಗಳ ಕಾಯಕದ ಮುಖಾಂತರ ಶಿವಯೋಗವನ್ನು ಸಾಧಿಸಿದವರು. ಕಳೆದ ನಾಲ್ಕೈದು ಶತಕಗಳ ಹಿಂದೆಯೇ ಬೆಳಗಾಂವಿಯಲ್ಲಿ ಒಂದು ಚಿಕ್ಕ ಪ್ರಸಾದ ನಿಲಯವನ್ನು ಪ್ರಾರಂಭಿಸಿದರು. ಇಂದಿಗೆ ಅವರ ಅವಿರತ ಪ್ರಯತ್ನ ಮತ್ತು ಮೌನ ತಪೋ ಬಲದಿಂದ ಬೆಳಗಾಂವ ನಗರದಲ್ಲಿ ಇಪ್ಪತ್ತಕ್ಕಿಂತಲೂ ಹೆಚ್ಚು ಶಿಕ್ಷಣ ಸಂಸ್ಥೆಗಳು ನೆಲೆ ನಿಂತಿವೆ. ಅವರು ಈಗ ಆರೇಳುನೂರು ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿ ಸೌಕರ್ಯಗಳನ್ನು ಒದಗಿಸುತ್ತಿರುವರು.

ಅಖಿಲ ಭಾರತ ಮತ್ತು ರಾಜ್ಯ ಸರ್ಕಾರಗಳು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕೂಡ್ರಲಿಚ್ಛಿಸುವ ಪ್ರತಿಭಾವಂತ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಸಹಾಯ ಒದಗಿಸುವುದಕ್ಕೋಸ್ಕರ ಬೆಂಗಳೂರು ಮಹಾನಗರದಲ್ಲಿ ಒಂದು ಕಲ್ಯಾಣ ಕೇಂದ್ರವನ್ನು ಸ್ಥಾಪಿಸಿದ ಮಹತಿ ಅವರದು. ಈಗಾಗಲೇ ಈ ಕೇಂದ್ರದ ಸಹಾಯ ಪಡೆದು ಕೇಂದ್ರ ಮತ್ತು ರಾಜ್ಯ ಲೋಕಸೇವಾ ಆಯೋಗದವರು ನಡೆಸಿದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳ ಅನೇಕ ಹುದ್ದೆಗಳಲ್ಲಿ ಕೆಲಸ ಮಾಡುತ್ತಿರುವರು.

ಈ ಕೇಂದ್ರವು ಇತ್ತೀಚೆಗೆ ಪರದೇಶಗಳಿಗೆ ಉಚ್ಚ ಶಿಕ್ಷಣಕ್ಕಾಗಿ ಹೋಗಬಯಸುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸಾಲದ ರೂಪದಲ್ಲಿ ಧನ ಸಹಾಯ ಕೊಡುವ ಯೋಜನೆಯನ್ನು ಹಾಕಿಕೊಂಡು ಇತ್ತೀಚೆಗೆ ಒಬ್ಬ ವಿದ್ಯಾರ್ಥಿಗೆ ಧನಸಹಾಯ ಕೊಡಲಾಗಿದೆ.

ಸನ್ 1991ರಿಂದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕೂಡ್ರುವ ವಿದ್ಯಾರ್ಥಿಗಳು ತರಬೇತಿಗೋಸ್ಕರ ನವದಿಲ್ಲಿಗೆ ಹೋಗಬಯಸುವ ವಿದ್ಯಾರ್ಥಿ ವಿದ್ಯಾರ್ಥಿನಿಯರ ಅನುಕೂಲಕ್ಕಾಗಿ ದಿಲ್ಲಿಯಲ್ಲಿ ವಸತಿ ಸೌಕರ್ಯವನ್ನು ಏರ್ಪಡಿಸಲಾಗಿದೆ. ಈಗಾಗಲೇ ದಿಲ್ಲಿಯಲ್ಲಿಯ ನಮ್ಮ ಕೇಂದ್ರದಲ್ಲಿ ಇಬ್ಬರು ವಿದ್ಯಾರ್ಥಿನಿಯರು ಮೂವರು ವಿದ್ಯಾರ್ಥಿಗಳು ಈ ವಸತಿ ಸೌಕರ್ಯದ ನೆರವನ್ನು ಪಡೆಯುತ್ತಿರುವರು.

ಬೆಳಗಾಂವ ಜಿಲ್ಲೆಯ ನಾಗನೂರ ಶ್ರೀಗಳಿಂದ ಸ್ಥಾಪಿತವಾದ ಈ ಕೇಂದ್ರದ ಲಾಭ ಪಡೆಯಲಿಚ್ಛಿಸುವವರು ಕೆಳಕಂಡ ಪದಾಧಿಕಾರಿಗಳನ್ನು ಸಂಪರ್ಕಿಸಿ ಹೆಚ್ಚಿನ ವಿವರ ಪಡೆಯಬೇಕಾಗಿ ಕೋರಿದೆ.

| | | |
|---|---|---|
| ಸ್ಥಳ : ಬೆಂಗಳೂರು | ಜಿ. ಎಂ. ಹಿರೇಮಠ | ಸಿ. ಎ. ಜಮಖಂಡಿ ಮಠ |
| ತಾ॥ ೧-೮-೧೯೯೧ | ಕಾರ್ಯದರ್ಶಿ | ಚೇರ್ಮನ್ |

# KARNATAKA HOUSING BOARD

## INTRODUCTION :

Housing has emerged one of the most important felt needs of the country, next only to the food and clothing. Karnataka Housing Board has dedicated itself to the cause of needy, houseless people.

Predominently, the Housing Board has engaged in construction of low cost houses. It has been the endeavour of the Board to construct as many houses as possible to the weaker section of the society at reasonable cost. Karnataka Housing Board also acts as an agency to channelise the institutional loans for Janata Housing and Bhagyamandira Housing Schemes in the state.

## ACHIEVEMENTS :

Ever since its inception, the Karnataka Housing Board has constructed 80,283 houses of various categories with an investment of Rs. 160.66 crores in the State till the end of March 1989. Apart from providing affordable houses/sites to the houseless/siteless people, the Board is providing cash loan assistance to the needy individuals for constructions of houses, the assistance varying from Rs. 10,800-00 to Rs. 1,20,000-00. For the year 1990-91, it is programmed to tackle about 15,622 houses of various categories with an estimated capital expenditure of Rs. 44.00 crores. The major sources of finance for the housing projects are state plan allocations, loan from financial institutions, i.e., HUDCO, HDFC, CANFIN., Commercial Banks, National Housing Bank etc., and also by raising of debentures and allotees contributions. HUDCO has been the largest contributor to the housing activities of Karnataka Housing Board.

The Karnataka Housing Board has introduced number of cost effective, innovative technology in puts in the housing projects since 1987-88 onwards. To cite a few instances, the following are the Housing Schemes where new cost effective technology is adopted.

1) Under ream pile foundation in black cotton soil area at Shahapur, Sandur and Mundgod. 2) The soil cement blocks in superstructure at Yelahanka and Hosakote. 3) Hallow cement blocks at Kavalbyarasandra for superstructure. 4) B. S. Slab technology is adopted at Composite Housing Scheme at Beeranahalli Tank Bed, Hassan. 5) Rafters and panel roofing is successfully implemented at Composite Housing Scheme at Navanagar, Hubli. 6. 'L' panel roofing is used at Shahapur, Gulbarga. 7) The new technique of composite concrete boulder blocks with Shahabad stone roofing at R.C.C. rafters at Mudhol (Dist. Bijapur). 8) The Karnataka Housing Board is doing its best totranslate the dreams of owning a house into reality.

## SPECIAL SCHEMES :

To increase the house stock in general and also provide the affordable houses to the socio-economically vulnerable groups, the Board has taken up some special housing scheme in addition to regular composite housing schemes. They are housing schemes for 1) Beedi workers 2) SCs/STs 3) Single working women and so on.

The Karnataka Housing Board is doing its best to translate the dreams of owning a house into reality.

ಡಾ|| ಎಂ. ಚಿದಾನಂದಮೂರ್ತಿಯವರ

ಅಭಿನಂದನ ಸಮಾರಂಭಕ್ಕೆ

ಹಾರ್ದಿಕ ಶುಭಾಶಯಗಳು

# ಸದಾಶಿವ ಅಂಡ್ ಕೊ.

ತೆರಿಗೆ ಸಮಾಲೋಚಕರು



ಎರಡನೆಯ ಮಹಡಿ, ಶ್ರೀ ಸರ್ಪಭೂಷಣ ಮಠದ ಕಟ್ಟಡ

ಕೆಂಪೇಗೌಡ ವೃತ್ತ, ಬೆಂಗಳೂರು-560 009

ಎಂ. ಸದಾಶಿವಪ್ಪ

ಮತ್ತು

ಎಸ್. ಜಿ. ತೋಂಟದಾರ್ಯ

ಶುಭಾಶಯಗಳು :

## ಕನ್ನಡ - ಕನ್ನಡಿಗ - ಕರ್ನಾಟಕಕ್ಕಾಗಿ

ದುಡಿದಿರುವ, ದುಡಿಯುತ್ತಿರುವ ಡಾ॥ ಎಂ. ಚಿದಾನಂದಮೂರ್ತಿಯವರು ೬೧ನೆಯ ವರ್ಷಕ್ಕೆ ಪದಾರ್ಪಣೆ ಮಾಡುತ್ತಿರುವ ಈ ಶುಭ ಸಂದರ್ಭದಲ್ಲಿ ನಮ್ಮ ಸಂಘದ ಅಧ್ಯಕ್ಷರೂ ಆದ ಅವರಿಗೆ ಭಗವಂತನು ಆಯುರಾರೋಗ್ಯ ದಯಪಾಲಿಸಲೆಂದು ಪುಲಿಕೇಶಿ ಕನ್ನಡ ಸಂಘದ ಪರವಾಗಿ ಪ್ರಾರ್ಥಿಸುತ್ತೇನೆ.

ಬ. ರಾ. **ಶಿವಕುಮಾರ್**, ಬಿ.ಎ., ಎಲ್‌ಎಲ್.ಬಿ.
ಕಾರ್ಯದರ್ಶಿ
**ಪುಲಿಕೇಶಿ ಕನ್ನಡ ಸಂಘ**
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

---

**ಡಾ|| ಎಂ. ಚಿದಾನಂದಮೂರ್ತಿಯವರ**
**ಅಭಿನಂದನ ಸಮಾರಂಭಕ್ಕೆ**
**ಹಾರ್ದಿಕ ಶುಭಾಶಯಗಳು**



# ವಜ್ರೇಶ್ವರಿ ಆರ್ಟ್ಸ್ ಕಂಬೈನ್ಸ್

**ಗಾಂಧಿನಗರ, ಬೆಂಗಳೂರು-೫೬೦ ೦೦೯**

---

ಕನ್ನಡ ಚೇತನ

ಡಾ|| ಎಂ. ಚಿದಾನಂದಮೂರ್ತಿಯವರ

ಅಭಿನಂದನ ಸಮಾರಂಭಕ್ಕೆ

ಶುಭ ಹಾರೈಕೆಗಳು



ಕರ್ನಾಟಕ

ಕನ್ನಡ ಕ್ರೈಸ್ತ

ಯಾಜಕರ ಬಳಗ

ಬೆಂಗಳೂರು

ಡಾ|| ಎಂ. ಚಿದಾನಂದಮೂರ್ತಿಯವರ
ಅಭಿನಂದನ ಸಮಾರಂಭಕ್ಕೆ
ಶುಭ ಹಾರೈಕೆಗಳು

ಬಿ. ಬಿ. ರೇಣುಕಾರ್ಯ
ಮತ್ತು
ಸಹೋದರರು



ಕಾಫಿ ಪ್ಲಾಂಟರ್ಸ್, ಅನ್ನಪೂರ್ಣ ಎಸ್ಟೇಟ್
ಆಲ್ದೂರ್ ಅಂಚೆ, ಚಿಕ್ಕಮಗಳೂರು ಜಿಲ್ಲೆ

ಡಾ॥ ಎಂ. ಚಿದಾನಂದಮೂರ್ತಿಯವರ

ಅಭಿನಂದನ ಸಮಾರಂಭಕ್ಕೆ

ಶುಭ ಹಾರೈಕೆಗಳು



# ರಾಷ್ಟ್ರೋತ್ಥಾನ ಪರಿಷತ್

‘ಕೇಶವ ಶಿಲ್ಪ’, ಕೆಂಪೇಗೌಡನಗರ, ಬೆಂಗಳೂರು-೧೯

ಡಾ|| ಎಂ. ಚಿದಾನಂದಮೂರ್ತಿಯವರ

ಅಭಿನಂದನ ಸಮಾರಂಭಕ್ಕೆ

ಯಶ ಕೋರುವ

ಎಂ. ಕೃಷ್ಣಪ್ಪ



ಎಸ್. ಎಲ್. ಎನ್. ಎಂಟರ್‌ಪ್ರೈಸಸ್

ಹೈಪಾಯಿಂಟ್, ಅರಮನೆ ರಸ್ತೆ

ಬೆಂಗಳೂರು

## ಡಾ. ಎಂ. ಚಿದಾನಂದಮೂರ್ತಿಯವರ ಅಭಿನಂದನ ಸಮಾರಂಭಕ್ಕೆ ಹಾರ್ದಿಕ ಶುಭಾಶಯಗಳು



ಪದ್ಮಶ್ರೀ ಆರ್.ಎಂ.ಬಿ. ಆರಾಧ್ಯರು

### ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯರು ಮತ್ತು ಮಕ್ಕಳು ಹಾಗೂ ಅವರ ಸೋದರ ಸಂಸ್ಥೆಗಳು

1. ದಾತಾ ಬಿಲ್ಡರ್ಸ್ (ಪ್ರೈ) ಲಿ.
2. ಆರಾಧ್ಯ ಅಂಡ್ ಆರಾಧ್ಯ ಬಿಲ್ಡರ್ಸ್ (ಪ್ರೈ) ಲಿ.
3. ಎಂ.ಸಿ.ಇ. ಕೆಪ್ಯಾಸಿಟರ್ಸ್ (ಪ್ರೈ) ಲಿ.
4. ಕೆ.ಎಸ್.ಸಿ. ಹೋಟೆಲ್ಸ್ ಅಂಡ್ ಇಂಜಿನಿಯರಿಂಗ್ (ಪ್ರೈ) ಲಿ.
5. ರಾಮ ಲೀಲಾ ಡೆವಲಪರ್ಸ್ (ಪ್ರೈ) ಲಿ.
6. ದೇವತಾ ಬಿಲ್ಡರ್ಸ್
7. ಡಿವೈನ್ ಕನ್ ಸ್ಟ್ರಕ್ಷನ್ಸ್
8. ಕ್ವಾಲಿಟಿ ಸಿಮೆಂಟ್ ವರ್ಕ್ಸ್
9. ಆರಾಧ್ಯ ಕಾಂಪ್ಲೆಕ್ಸ್
10. ಕ್ಲಾಸಿಕ್ ಮಿನರಲ್ ಇಂಟರ್ ನ್ಯಾಷನಲ್
11. ಮೆ. ಸರಸ್ವತಿ ಥಿಯೇಟರ್ಸ್, ಮೈಸೂರು
12. ಡೆಕ್ಕನ್ ಗ್ರಾನೈಟ್ಸ್